

ಚರಿತ್ರ ವಿಭಾಗ ಮಾಲೆ-೪

# ಕನ್ನಡ ಚಳುವಳಿಗಳು

ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ-೪

ಡಾ. ಸಿ. ಆರ್. ಗೋವಿಂದರಾಜು



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚರಿತ್ರೆ ವಿಭಾಗ ಮಾಲೆ - ೪

# ಕನ್ನಡ ಚಳವಳಿಗಳು

## ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ - ೪

ಡಾ. ಸಿ. ಆರ್. ಗೋವಿಂದರಾಜು



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**KANNADA CHALAVALIGALU**
A Study of Kannada Movements
by Dr. C. R. Govindaraju
Reader, Department of History
Kannada University, Hampi

(Post Unification Karnataka Movements Series, Vol. 4)

*Published by*
Prof. A. V. Navada
Director, Prasaranga
Kannada University, Hampi
Vidyaranya - 583 276

Pages : xii+92

First Edition 1999

Price : Rs. 50/-



ಪ್ರಕಾಶಕರು
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬೆಲೆ : ರೂ. ೫೦/-

ಮುಖಪುಟ : ಕೆ. ಕೆ. ಮಕಾಳಿ

ಮುದ್ರಣ
ಲಕ್ಷ್ಮಿ ಮುದ್ರಣಾಲಯ
೧೧೭/೨, ೫ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು - ೧೮
✆ ೬೬೧೩೧೨೩, ೬೬೧೮೭೫೨

*

# ದೇಸಿಯೊಳ್ ಪುಗುವುದು

ಡಾ. ಎಂ.ಎಂ.ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಶಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂಥ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನ ಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶ ಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ

ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆಯ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿ ವಹಿಸಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕ ಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಈ ಪ್ರಸಾರಾಂಗದ ಇತ್ತೀಚಿನ ಪ್ರಕಟಣೆಯಾಗಿದೆ 'ಕನ್ನಡ ಚಳವಳಿಗಳು'.

ಅನ್ಯಾಯವನ್ನು ಸಹಿಸಿಕೊಂಡು ಹೋಗುತ್ತಲಿರುವ ಸ್ವಭಾವದ ಭಾರತೀಯರು ಇತ್ತೀಚೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಮನೋಧರ್ಮವನ್ನು ರೂಢಿಸಿಕೊಂಡಿರುವ ಫಲ 'ಚಳವಳಿ'. ಏಕೀಕರಣೋತ್ತರ ಕರ್ನಾಟಕದಲ್ಲಿ ತಲೆದೋರಿದ ಇಂಥ ಆರು ಮುಖ್ಯ ಚಳವಳಿಗಳನ್ನು ಕುರಿತು ಚರಿತ್ರೆ ವಿಭಾಗವು ಯೋಜನೆಯೊಂದನ್ನು ಕೈಗೆತ್ತಿಕೊಂಡಿದೆ. ಇದರ ಅಂಗವಾಗಿ ಪ್ರಕಟವಾಗುತ್ತಲಿರುವ ಆರು ಕೃತಿಗಳಲ್ಲಿ 'ಕನ್ನಡ ಚಳವಳಿಗಳು' ಒಂದು. ಇದನ್ನು ರಚಿಸಿದ ಡಾ. ಸಿ. ಆರ್. ಗೋವಿಂದರಾಜು ಅವರಿಗೆ ನಮ್ಮ ಧನ್ಯವಾದಗಳು ಸಲ್ಲುತ್ತವೆ.



# ಲೇಖಕರ ಮಾತು

ನಾಡು, ನುಡಿ, ಸಾಹಿತ್ಯ, ಚರಿತ್ರೆ, ಸಂಸ್ಕೃತಿ ವಿಚಾರಗಳನ್ನು ಕುರಿತಂತೆ ಸಂಶೋಧನೆ-ಅಧ್ಯಯನಗಳನ್ನು ಮಾಡಲು ಹುಟ್ಟಿಕೊಂಡಿರುವ ಸಂಸ್ಥೆಯೆ ಹಂಪಿಯ ಕನ್ನಡ ವಿಶ್ವವಿದ್ಯಾಲಯ. ಇಂಥ ಪ್ರಧಾನ ಆಶಯವನ್ನು ಸಾಕಾರಗೊಳಿಸಲು ಸಂಸ್ಥೆಯು ಹಲವು ಪ್ರಯೋಗಗಳಲ್ಲಿ ನಿರತವಾಗಿದೆ. ಪ್ರಸ್ತುತ 'ಕನ್ನಡ ಚಳವಳಿಗಳು' ಕೃತಿಯು ಪ್ರಕಟವಾಗುತ್ತಿರುವುದು ಸಹ ಅಂಥ ಆಶಯದ ನೆಲೆಯಿಂದಲೆ. ನಾಡು ಏಕೀಕೃತವಾದ ಮೇಲೆ ನಮ್ಮ ಮನೋಜೀವನವು ಭಿನ್ನ ಬಗೆಯ ಅಡ್ಡಿ-ಆತಂಕಗಳನ್ನು ಎದುರುಗೊಳ್ಳುವಂತಾಗಿದೆ. ಅವುಗಳಲ್ಲಿ ರಾಜಕಾರಣದ ಅಸ್ಥಿರತೆ, ಸಾಮಾಜಿಕ ಸಂಘರ್ಷ, ಆರ್ಥಿಕ ತಾರತಮ್ಯತೆ ಹಾಗೂ ಸಾಂಸ್ಕೃತಿಕ ಆಘಾತಗಳು ಪ್ರಧಾನವಾದುವು. ಕನ್ನಡದ ಭೂಪ್ರದೇಶಗಳು ನಮ್ಮ ಅಧೀನಕ್ಕೆ ಬಂದು ನಾಲ್ಕು ದಶಕಗಳೇ ಕಳೆದಿವೆ. ಆದರೆ ಈ ಹೊತ್ತಿಗೂ ಕನ್ನಡ-ಕನ್ನಡಿಗ-ಕರ್ನಾಟಕದ ಸಮಸ್ಯೆಗಳು ಬಗೆಹರಿದಿಲ್ಲ. ಅದರಲ್ಲೂ ಗಡಿ, ಜಲ, ಪರಿಸರ, ರೈತ-ಕಾರ್ಮಿಕರ ಬವಣೆ, ನಿಮ್ನವರ್ಗಗಳ ಶೋಷಣೆ ಇತ್ಯಾದಿಗಳನ್ನು ಕುರಿತ ಆತಂಕಗಳು ಹಾಗೆಯೇ ಮುಂದುವರೆದಿವೆ. 'ಕನ್ನಡ' ಭಾಷೆ ಹಾಗೂ ಕನ್ನಡಿಗರು ತಮ್ಮ ಅನನ್ಯತೆ, ಅಸ್ತಿತ್ವಗಳನ್ನು ಕಾಯ್ದುಕೊಳ್ಳುವಲ್ಲಿ ಹೆಣಗಾಡುವ ಪರಿಸರ ನಿರ್ಮಾಣವಾಗಿದೆ. ಸೂಕ್ಷ್ಮ ಸಂವೇದನೆಯ 'ಭಾಷೆ'ಯನ್ನು ಭಾವನಾತ್ಮಕವಾಗಿ ನೋಡುವ ನೋಟ ಇಂದಿನ ಸ್ಥಿತಿಗತಿಗಳಿಗೆ ಸರಿಹೊಂದುವಂಥದ್ದಲ್ಲ. ಬದಲಾಗಿ ಭಾಷೆಯ ಸಾಂಸ್ಕೃತಿಕ ಜರೂರನ್ನು ಗಟ್ಟಿಮಾಡುವ ನಿಟ್ಟಿನಲ್ಲಿ ಕನ್ನಡಿಗರು ಚಿಂತನೆ ಮಾಡಬೇಕಿದೆ. ಈ ನಿಟ್ಟಿನಲ್ಲಿ ಕ್ರಿಯಾಶೀಲವಾಗುವುದು ಹೆಚ್ಚು ತುರ್ತಿನದು. ಏಕೆಂದರೆ 'ಕನ್ನಡ'ವನ್ನು ಕುರಿತ ಆತಂಕ ಕೇವಲ ಭಾಷಿಕವಾದುದಲ್ಲ. ಬದಲಾಗಿ ಅದು ನಮ್ಮ ಈ ಹೊತ್ತಿನ ರಾಜ್ಯದ ಹಾಗೂ ಜನರ ಎಲ್ಲ ಆಗು-ಹೋಗುಗಳ ಪ್ರತೀಕ. 'ಕನ್ನಡ ಚಳವಳಿ' ಎಂಬುದು ಹುಟ್ಟಿಕೊಂಡದ್ದು ಸಹ ಇಂಥ ಚಾರಿತ್ರಿಕ ತುರ್ತಿನಿಂದಲೇ. ಏಕೀಕರಣೋತ್ತರ ಕರ್ನಾಟಕವು ಈ ದಿಸೆಯಲ್ಲಿ ಹಲವು ಕನ್ನಡ ಸಂಘ-ಸಂಸ್ಥೆಗಳ, ಕನ್ನಡ ಕಾರ್ಯಕರ್ತರ, ಚಳವಳಿಗಾರರ, ಚಿಂತಕರ ಏಳು-ಬೀಳುಗಳನ್ನು ಕಂಡಿದೆ. ಹೀಗಾಗಿ ಈ ಚಳವಳಿಗೆ ಗತ ಹಾಗೂ ವರ್ತಮಾನದ ಉಸಿರಾಟ, ಚರಿತ್ರೆಗಳಿವೆ. ಆಧುನಿಕ ಕರ್ನಾಟಕದ 'ಕನ್ನಡ ಚಳವಳಿ'ಯ ಚರಿತ್ರೆಯನ್ನು ನಿರ್ವಚಿಸಿ, ಪುನರ್ರಚಿಸುವ ಪ್ರಯತ್ನಗಳು ಆಗಬೇಕಿದೆ. ಇಂಥ ಅಕಾಡೆಮಿಕ್ ಪ್ರಯತ್ನಗಳಲ್ಲಿ ಪ್ರಸ್ತುತ ಕೃತಿ ಮೊದಲನೆಯದು.

ಪ್ರಸ್ತುತ ಅಧ್ಯಯನವು ಅಂತಿಮರೂಪ ಪಡೆದು ಪ್ರಕಾಶಿತವಾಗುತ್ತಿರುವುದಕ್ಕೆ ಮಾನ್ಯ ಕುಲಪತಿಗಳಾದ ಎಂ. ಎಂ. ಕಲಬುರ್ಗಿ ಅವರ ಅಕ್ಕರೆ-ಪ್ರೋತ್ಸಾಹಗಳೇ ಕಾರಣ. ಕಾಲೇಜು ದಿನಗಳಲ್ಲಿನ 'ಕನ್ನಡ ಚಳವಳಿ'ಗಳಲ್ಲಿ ಭಾಗವಹಿಸುತ್ತಿದ್ದ ನನಗೆ ಅವುಗಳನ್ನು ಕುರಿತೆ ಅಧ್ಯಯನ

ಕೈಗೊಳ್ಳಲು ಹುರಿದುಂಬಿಸಿದ ಶ್ರೀಯುತರಿಗೆ ನನ್ನ ಮೊದಲ ನಮನಗಳು ಸಲ್ಲುತ್ತವೆ. ನನ್ನ ಅಧ್ಯಯನ, ಬರವಣಿಗೆಗಳನ್ನು ಗಮನಿಸಿ ಬೆಂಬಲಿಸುತ್ತಿರುವ ನಾಡಿನ ಹಿರಿಯರು, ವಿದ್ವಾಂಸರು, ಆತ್ಮೀಯರು ಅನೇಕರಿದ್ದಾರೆ. ಅವರಲ್ಲಿ ಎಂ. ವೀರಪ್ಪಮೊಯಿಲಿ, ಚಂದ್ರಶೇಖರ ಕಂಬಾರ, ಯು. ಆರ್. ಅನಂತಮೂರ್ತಿ, ಕೆ. ವಿ. ಸುಬ್ಬಣ್ಣ, ಎಂ. ಚಿದಾನಂದಮೂರ್ತಿ, ಶಾಂತರಸ, ಗೊರುಚ, ದೇ. ಜವರೇಗೌಡ, ಹಂಪನಾ, ಎಸ್. ಶೆಟ್ಟರ್, ಸಿದ್ಧಲಿಂಗಯ್ಯ, ಪಾಪು, ಕೆ.ಎಂ.ಎಸ್., ಕೆ.ವಿ.ನಾ., ಕಲ್ಗುಡಿ, ಕಿ.ರಂ. ನಾಗರಾಜ, ಎಸ್. ಚಂದ್ರಶೇಖರ್, ಕರೀಗೌಡ ಬೀಚನಹಳ್ಳಿ, ಹಾಮಾನಾ, ಹಿ.ಚಿ.ಬೋ., ಲಕ್ಷ್ಮಣ್ ತೆಲಗಾವಿ, ಎಂ.ಪಿ. ಪ್ರಕಾಶ್, ಜೀವರಾಜ ಆಳ್ವ ಮೊದಲಾದವರು ಪ್ರಮುಖರು. ಇವರೆಲ್ಲರಿಗೂ ನನ್ನ ತುಂಬುಹೃದಯದ ಧನ್ಯವಾದಗಳು.

'ಕನ್ನಡ ಚಳವಳಿ'ಗಳನ್ನು ಕುರಿತಂತೆ ಅಧ್ಯಯನ ಕೈಗೊಳ್ಳಲು ನಾಡಿನ ಸರ್ಕಾರಿ ಹಾಗೂ ಖಾಸಗಿ ಸಂಘ-ಸಂಸ್ಥೆಗಳು, ಗ್ರಂಥಾಲಯಗಳು, ಪತ್ರಾಗಾರ ಇಲಾಖೆ, ವಿಶ್ವವಿದ್ಯಾಲಯಗಳು, ವ್ಯಕ್ತಿಗಳು ತಮ್ಮಲ್ಲಿದ್ದ ಮಾಹಿತಿ-ಆಕರಗಳನ್ನು ನೀಡಿ ಸಹಕರಿಸಿದ್ದಾರೆ. ಪ್ರೊ. ಚಂದ್ರಶೇಖರ ಪಾಟೀಲ ಮತ್ತು ಕುಲಪತಿಗಳಾದ ಎಂ. ಎಂ. ಕಲಬುರ್ಗಿ ಅವರು ಗೋಕಾಕ್ ಚಳವಳಿಯನ್ನು ಕುರಿತಂತೆ ಸಲಹೆ-ಸೂಚನೆಗಳ ಮೂಲಕ ಚರ್ಚಿಸಿದ್ದಾರೆ. ಇವರೆಲ್ಲರನ್ನು ಸ್ಮರಿಸುವುದು ನನ್ನ ಕರ್ತವ್ಯ. ಅಂತೆಯೇ ಕನ್ನಡ ಚಳವಳಿಗಳಲ್ಲಿ ತೊಡಗಿಸಿ ಕೊಂಡಿರುವ ಚಳವಳಿಗಾರರು ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರುಗಳಲ್ಲಿ ಕೋಣಂದೂರು ಲಿಂಗಪ್ಪ, ಬೆ. ನಿ. ಈಶ್ವರಪ್ಪ, ವಾಟಾಳ್ ನಾಗರಾಜ್, ಅಶೋಕ್ ದೊಡ್ಡಮೇಟಿ, ಎಂ. ಚಿದಾನಂದಮೂರ್ತಿ, ಕೋಡಿಹೊಸಹಳ್ಳಿ ರಾಮಣ್ಣ, ವೆ. ಶ್ರೀನಿವಾಸ, ರಾ. ನಂ. ಚಂದ್ರಶೇಖರ್ ಮೊದಲಾದವರು ವಿಶೇಷವಾಗಿ ಕಾಳಜಿ ವಹಿಸಿ ಆಕರ-ಸಾಮಗ್ರಿಗಳನ್ನು ದೊರಕಿಸಿಕೊಟ್ಟಿರುವುದರಿಂದ ಇವರೆಲ್ಲರಿಗೂ ನಾನು ಆಭಾರಿ. ಕ್ಷೇತ್ರಕಾರ್ಯದಲ್ಲಿ ಹಾಗೂ ಪತ್ರಿಕಾ ಪ್ರಕಟನೆಗೆ ಸ್ಪಂದಿಸಿದ ವ್ಯಕ್ತಿ-ಸಂಸ್ಥೆಗಳೆಲ್ಲವಕ್ಕೂ ನನ್ನ ಧನ್ಯವಾದಗಳು.

ಕೃತಿಯ ಮುದ್ರಣ ಹಂತದಲ್ಲಿ ಸಹಕರಿಸಿದ ಪ್ರಸಾರಾಂಗದ ನಿರ್ದೇಶಕರಾದ ಎ. ವಿ. ನಾವಡ, ಕಲಾವಿದ ಕೆ. ಕೆ. ಮಕಾಳಿ, ಕೆ. ಎಲ್. ರಾಜಶೇಖರ್ ಹಾಗೂ ಇನ್ನುಳಿದ ಸಿಬ್ಬಂದಿವರ್ಗಕ್ಕೂ, ಲಕ್ಷ್ಮಿ ಮುದ್ರಣಾಲಯದ ಅಶೋಕ್‌ಕುಮಾರ್ ಮತ್ತು ಅವರ ತಂಡಕ್ಕೂ ನನ್ನ ಕೃತಜ್ಞತೆಗಳು. ಉಳಿದಂತೆ ವಿಭಾಗದ, ವಿಶ್ವವಿದ್ಯಾಲಯದ ಎಲ್ಲ ಸಹೋದ್ಯೋಗಿಗಳನ್ನು ಈ ಸಂದರ್ಭದಲ್ಲಿ ನೆನಸಿಕೊಳ್ಳುತ್ತೇನೆ. ಅಧ್ಯಯನದುದ್ದಕ್ಕೂ ಸಹಕರಿಸಿದ ಬಾಳ ಸಂಗಾತಿ ಭಾಗ್ಯವತಿ ಹಾಗೂ ಸ್ನೇಹಿತರಿಗೆಲ್ಲರಿಗೂ ನನ್ನ ಧನ್ಯವಾದಗಳು ಸಲ್ಲುತ್ತವೆ.

**ಸಿ. ಆರ್. ಗೋವಿಂದರಾಜು**

# ಪರಿವಿಡಿ

□□

# ೧.೧.೧ ಪೀಠಿಕೆ-ಭಾಷೆ-ಭಾಷೆಯ ಸ್ವರೂಪ-ಭಾಷಿಕ (ಕನ್ನಡ) ಚಳವಳಿ ತಾತ್ವಿಕತೆ-ಅಧ್ಯಯನದ ವಿಧಾನ-ಜರೂರು-ಮಿತಿ

ಈ ಹೊತ್ತಿನ ಏಕೀಕೃತ ಕರ್ನಾಟಕಕ್ಕೆ ಮೊದಲು ಕನ್ನಡದ ಭೂ ಪ್ರದೇಶಗಳು ವಿಭಿನ್ನ ಆಡಳಿತ ಘಟಕಗಳಲ್ಲಿ ಹರಿದು ಹಂಚಿಹೋಗಿದ್ದವು. ಛಿದ್ರಗೊಂಡ ಭೂ ನೆಲೆಗಳಲ್ಲಿದ್ದ ಕನ್ನಡಿಗರು ಏಕೀಕರಣಕ್ಕೆ (೧-೧೧-೧೯೫೬) ಮೊದಲು ಒಂದೆ ಆಡಳಿತದ ಪರಿಧಿಗೆ ಬರಲು ಹಾತೊರೆದದ್ದು ಅನಿವಾರ್ಯ. ಏಕೆಂದರೆ ಈ ಒಂದುಗೂಡುವ ಪ್ರಕ್ರಿಯೆಯ ಹಿಂದೆ ಅಡಗಿದ್ದುದು ಅವರು ಆಡುತ್ತಿದ್ದ ಕನ್ನಡ ಭಾಷೆಯೊಂದೆ. ಈ ಸಮಾನ ಅಂಶ (ಭಾಷೆ) ಎಲ್ಲರಿಗೂ ಸಂವಹನದ ಮಾಧ್ಯವೂ ಹೌದು. ಆದರೆ ಇದೊಂದೆ ಅಂಶವನ್ನು ಪ್ರಧಾನ ಎಂದು ಪರಿಗಣಿಸಲು ಸಾಧ್ಯ ಆಗುವುದಿಲ್ಲ. ಯಾವುದೆ ಭಾಷೆಯೊಂದರ ಹಿಂದೆ ಅದರ ಇನ್ನುಳಿದ ಸಾಂಸ್ಕೃತಿಕ ಆಯಾಮಗಳೂ ಅಡಗಿರುತ್ತವೆ ಎಂಬುದು ಪ್ರಧಾನವಾಗುತ್ತದೆ. ಭಾಷೆಯೊಂದರ ಒಳಗಂಟುಗಳು ಅನೇಕ. ಒಂದು ಭೌಗೋಳಿಕ ಪರಿಸರದಲ್ಲಿ ವಾಸಿಸುವ ಜನರು ಹಾಗೂ ಅವರು ಆಡುವ ಭಾಷೆ, ಸಂಸ್ಕೃತಿ ವಿಚಾರಗಳು ತಮ್ಮವೇ ಆದ ಅನನ್ಯತೆಯನ್ನು ಪಡೆದಿರುತ್ತವೆ. ಭಾಷಿಕ ನೆಲೆಗಳು ಅನಾವರಣಗೊಳ್ಳುವುದು ನಿಗದಿತ ಭೂ ಪರಿಸರದಲ್ಲಿ (ಕರ್ನಾಟಕ) ವಾಸಿಸುವ ಜನ ಸಮುದಾಯವು (ಕನ್ನಡಿಗರು) ವ್ಯವಹರಿಸುವ ಭಾಷೆ (ಕನ್ನಡ)ಯಿಂದ. ಈ ಮಾತು ಜಗತ್ತಿನ ಯಾವುದೆ ಭಾಷಿಕರಿಗೂ ಅನ್ವಯವಾಗುವಂಥದ್ದು. ಆದರೆ ಇಲ್ಲಿ ಅಧ್ಯಯನದ ದೃಷ್ಟಿಯಿಂದ ಕನ್ನಡ ಸಂದರ್ಭಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ.

ಭಾಷೆ ಕೇವಲ ಸಂವಹನ ಮಾಧ್ಯಮವಷ್ಟೇ ಅಲ್ಲ. ಈ ನೋಟ ಅಥವಾ ಗ್ರಹಿಕೆ ತೀರ ಸರಳೀಕರಣಗೊಳಿಸಿದ್ದು. ಬದಲಾಗಿ ಭಾಷೆಯೊಂದಕ್ಕೆ ತನ್ನದೇ ಆದ ಆಳ-ಅಗಲಗಳು ಇವೆ. ಭಾಷೆ ಹೇಗೆ ಸರಳಸ್ವರೂಪದ್ದಲ್ಲವೋ ಹಾಗೆಯೇ ಸಂಕೀರ್ಣವಾದದ್ದು ಹೌದು. ಅದರ ಇತರೆ ಚಹರೆಗಳನ್ನು ಗ್ರಹಿಸುವುದರ ಮೂಲಕ ಭಾಷಾ ಸಂಬಂಧಿ ಚಳವಳಿಗಳನ್ನು ಪ್ರವೇಶಿಸಲು ಸಾಧ್ಯ.

ಭಾಷೆಗೆ ಸಂಬಂಧಿಸಿದಂತೆ ಇಂದು ಅನೇಕ ರೀತಿಯ ವೈಜ್ಞಾನಿಕ ಸಂಶೋಧನೆ-ಅಧ್ಯಯನಗಳು ನಡೆಯುತ್ತಿವೆ. ಆ ಎಲ್ಲ ವಿವರಣೆಗಳು ಇಲ್ಲಿ ಅಪ್ರಸ್ತುತ. ನಾವು ಇಂದು ನಿರ್ದಿಷ್ಟ ಜನಸಮುದಾಯದ ಭಾಷೆಯೊಂದರ ಮೂಲಕ ಅದರ ವ್ಯಾಖ್ಯಾನವನ್ನೋ ಅಥವಾ ವ್ಯಾಖ್ಯಾನವೊಂದರ ಮೂಲಕ ಭಾಷೆಯನ್ನೋ ಒಂದು ಚೌಕಟ್ಟಿನೊಳಗೆ ಬಂಧಿಸಿಡಲು ಸಾಧ್ಯ ಆಗುವುದಿಲ್ಲ. ಬದಲಾಗಿ ಅನುಕೂಲಗಳಿಗೆ ಪೂರಕ ಆಗುವಂತೆ ಅರ್ಥೈಸುವ, ವ್ಯಾಖ್ಯಾನಿಸುವ ಅಥವಾ ಗ್ರಹಿಸುವ ಸಾಧ್ಯತೆಗಳನ್ನಾದರೂ ಕಂಡುಹಿಡಿಯ ಬಹುದು.

ಭಾಷೆಯು ಅಂತರ್ಯ ಅಂಗವಾದದ್ದು. ಭಾಷೆಗೂ ಮೆದುಳಿಗೂ ಅಥವಾ ಮನಸ್ಸಿಗೂ ನೇರಸಂಬಂಧಗಳಿವೆ. ಹೀಗಾಗಿ ಕ್ರಿಯೆಗಳನ್ನು ಮಾಡಲು ಸಹ ಭಾಷೆಯನ್ನೇ ಬಳಸಬೇಕಾಗುತ್ತದೆ. ಈ ತರಹ ವಿವರಣೆ-ಅಧ್ಯಯನಗಳು ವರ್ತನಾತ್ಮಕ ಮನೋವಿಜ್ಞಾನಿ (Behaviourists)ಗಳಿಗೆ ಸಂಬಂಧಪಟ್ಟಿದ್ದು. ಸಮಾಜದಲ್ಲಿ ಭಾಷೆ ಎಂಬುದು ಒಂದು ಅರ್ಥದಲ್ಲಿ ಸೂಚಕ (Indicator)ವೂ ಹೌದು. ಹೀಗಾಗಿ ಅದನ್ನು ಕೇವಲ ಬಳಕೆಯ ಪರಿಧಿಗೆ ಮಾತ್ರ ಸೀಮಿತಗೊಳಿಸುವುದು ಸರಿ ಅಲ್ಲ.

ಇಂದು ಜಗತ್ತಿನಾದ್ಯಂತ ೩,೦೦೦ (ಮೂರು ಸಾವಿರ) ಕ್ಕೂ ಹೆಚ್ಚಿನ ಭಾಷೆಗಳು ಚಾಲ್ತಿಯಲ್ಲಿ ಇವೆ. ಪ್ರಾಣಿ- ಪಕ್ಷಿಗಳಿಗೂ ತಮ್ಮದೇ ಆದ ಭಾಷೆಗಳು ಇವೆ ಎಂಬುದರ ಬಗ್ಗೆ ಅಧ್ಯಯನಗಳು ನಡೆದಿವೆ. ಅಂಥದ್ದರಲ್ಲಿ ಮಾನವ ಮತ್ತು ಭಾಷೆಯ ನಡುವಿನ ಸಂಬಂಧಗಳ ಬಗ್ಗೆ ಎರಡು ಮಾತಿಲ್ಲ. ಮಾನವ, ಅವನ ಮನಸ್ಸು ಹಾಗೂ ಭಾಷೆಗೆ ನೇರವಾದ ಸಂಬಂಧಗಳೇ ಇವೆ. ಮಗುವೊಂದು ಹುಟ್ಟುವಾಗ ತನ್ನ ಮೆದುಳಿನ 'ಒಂದು' ಭಾಷೆಯ ಮೂಲಕ ಹುಟ್ಟುತ್ತದೆ. ಆದರೆ ಅದು ಪರಿಸರದಲ್ಲಿ (ಸಮಾಜದಲ್ಲಿ) ಬೆಳವಣಿಗೆ ಹೊಂದುವ ಪ್ರಕ್ರಿಯೆಯಲ್ಲಿ 'ಇನ್ನುಳಿದ' ಭಾಷೆಗಳಿಗೂ ಪರಿವರ್ತನೆ ಹೊಂದುತ್ತಿರುತ್ತದೆ ಎಂಬುದನ್ನು ಗಮನಿಸಬೇಕು. ಹುಟ್ಟಿನಿಂದ ಎಲ್ಲರೂ 'ವಿಶ್ವಮಾನವ'ರೆ ಸರಿ. ಆದರೆ ಬೆಳೆದಂತೆ ಅವನು ಆಡುವ ಭಾಷೆಯ ಮುಖೇನ ತಮಿಳಿಗ, ಕನ್ನಡಿಗ, ಹಿಂದಿಗ, ಆಂಗ್ಲಿಗ, ಇಟಾಲಿಯನ್ ಮೊದಲಾದ ರೀತಿಗಳಲ್ಲಿ ಗುರುತಿಸಿಕೊಳ್ಳುತ್ತಾನೆ. ಭಾಷೆಯು ಮಾನವನ ಕಲಿಕೆ ಮಾತ್ರದಿಂದಾಗಿ ಬರುವಂಥದ್ದಲ್ಲ ಎಂಬುದನ್ನು ಸಹ ಗಮನಿಸಬೇಕು. ಅದೊಂದು ಮಾನವನಲ್ಲಿಯೆ ಅಂತರ್ಗತ ಆಗಿರುವ ಪ್ರಕ್ರಿಯೆ. ಸಂದರ್ಭಗಳಿಗೆ ಅನುಗುಣವಾಗಿ ವಿಭಿನ್ನ ರೀತಿಗಳಲ್ಲಿ ಪ್ರಕಟ ಆಗುತ್ತಿರುತ್ತದೆಯಷ್ಟೆ. ಭಾಷೆಯ ಹಿಂದೆ ಅಡಗಿರುವ ಜೈವಿಕ ನೆಲೆಗಳನ್ನೂ ಅಲ್ಲ ಗಳೆಯಲು ಸಾಧ್ಯ ಆಗುವುದಿಲ್ಲ.

ತಾತ್ವಿಕವಾಗಿ ಹೇಳುವುದಾದರೆ ಜಗತ್ತಿನ ಯಾವುದೇ ಭಾಷೆಗೆ ನಿರ್ದಿಷ್ಟ ಭೌಗೋಳಿಕ ಎಲ್ಲೆಗಳು ಇರುವುದಿಲ್ಲ. ಬದಲಾಗಿ ರಾಜಕೀಯ ಎಲ್ಲೆಗಳೇ ಪ್ರಧಾನ ಆಗಿರುತ್ತವೆ. ಯಾವುದೆ ಭಾಷೆಯಾದರೂ ಅದರ ಜನಸಮುದಾಯ, ಸಾಹಿತ್ಯ, ಚರಿತ್ರೆ, ಕಲೆ ಮೊದಲಾದ ಸಾಂಸ್ಕೃತಿಕ ಅಂಶಗಳಿಗಿಂತ ಅಲ್ಲಿನ ರಾಜಕಾರಣದ ಒತ್ತಡಗಳಿಂದಲೆ ಹೆಚ್ಚಿನ ಆಕ್ರಮಣವನ್ನು ಹೊಂದಿರುತ್ತದೆ. ಇದಕ್ಕೆ ಉದಾಹರಣೆಯಾಗಿ ಇಂಡಿಯಾದ ಸಂದರ್ಭದಲ್ಲಿನ ಭಾಷಾವಾರು ರಾಜ್ಯಗಳ ನಿರ್ಮಾಣದ ಪ್ರಕ್ರಿಯೆಗಳನ್ನು ಗಮನಿಸಬಹುದು. ಕುತೂಹಲದ ಸಂಗತಿ ಅಂದರೆ ಭಾಷೆಗಳ ಹಿನ್ನೆಲೆಯಲ್ಲಿ ನಿರ್ಮಾಣ ಆಗಿರುವ ಅನೇಕ ರಾಜ್ಯಗಳಿಗೆ ನಿಖರವಾದಂಥ ಭೌಗೋಳಿಕ ಹಾಗೂ ರಾಜಕೀಯವಾದ ಎಲ್ಲೆಗಳನ್ನು ಈ ಹೊತ್ತಿಗೂ ನಿರ್ಮಿಸಲು ಸಾಧ್ಯ ಆಗದೆ ಹೋಗಿರುವುದು. ಅಂತೆಯೆ ಕೆಲವು ಭಾಷೆಗಳಿಗೆ ಪ್ರತ್ಯೇಕ ರಾಜ್ಯಗಳನ್ನು ನಿರ್ಮಿಸಲು ಸಾಧ್ಯವೂ ಆಗಿಲ್ಲ. ಉದಾಹರಣೆಗೆ ಸಿಂಧಿ, ಉರ್ದು, ಹಿಂದಿ ಮೊದಲಾದವು. ಭಾಷಿಕ ಚಳವಳಿಗಳ ಬಗ್ಗೆ ಚಿಂತನೆ ಮಾಡುವಾಗ ಈ ರೀತಿಯ ಭಾಷಾಸಂಬಂಧಿ ವಿರೋಧಾಭಾಸಗಳನ್ನು ಗಮನಿಸದೆ ಮುಂದುವರೆಯಲು ಸಾಧ್ಯ ಇಲ್ಲ. ಪ್ರತಿಯೊಂದು ಭಾಷೆ-ಭಾಷಿಕರಿಗೂ ತಮ್ಮವೆ ಆದ ಭಾವನಾತ್ಮಕ ಹಿನ್ನೆಲೆ- ಪ್ರೇರಣೆ-ಒತ್ತಡಗಳು ಇರುತ್ತವೆ. ಸೂಕ್ಷ್ಮವಾದ ಸಂವೇದನೆಗಳು ಪ್ರತಿಯೊಂದು ಭಾಷೆಯ ಹಿಂದೆಯೂ ಕೆಲಸ ಮಾಡುತ್ತಿರುತ್ತವೆ

ಎಂಬುದನ್ನು ಗಮನಿಸಲೇಬೇಕು. ಭಾಷಾ ಸಂವೇದಿ ಭಾವನೆಗಳಿಗೆ ಧಕ್ಕೆ ಒದಗಿ ಬರುತ್ತಿದೆ ಎಂದ ಕೂಡಲೆ ಅನೇಕ ಸಂಘರ್ಷ-ಸವಾಲುಗಳು ಎದುರುಗೊಳ್ಳುವುದು ಉಂಟು. ಈ ಮಾತು ಭಾಷೆಯೊಂದರ ಆಂತರಿಕ ಹಾಗೂ ಬಾಹ್ಯ ಪರಿಸರಗಳೆರಡಕ್ಕೂ ಅನ್ವಯ ಆಗುತ್ತದೆ.

ಭಾಷಿಕ ಸಂಘರ್ಷ-ತಾರತಮ್ಯಗಳು ಆಯಾ ಭಾಷೆಗಳ ಶ್ರೇಷ್ಠತೆ ಅಥವಾ ಅಪಮಾನಗಳನ್ನು ಅತಿರೇಕಕ್ಕೆ ಕೊಂಡೊಯ್ಯುವ ಸಾಧ್ಯತೆಗಳು ಹೆಚ್ಚು. ಇಂಡಿಯಾದಂಥ ಬಹುಭಾಷಿಕ (Multi lingual) ಹಾಗೂ ಬಹು ಸಂಸ್ಕೃತಿ (Multi cultural) ಗಳನ್ನೊಳಗೊಂಡ ದೇಶದಲ್ಲಿಯಂತು ವೈಭವೀಕರಣ, ಶ್ರೇಷ್ಠತೆ, ಭಾವೋದ್ವೇಗಗಳನ್ನು ಹುಟ್ಟುಹಾಕುವ ಪ್ರಯತ್ನಗಳು ನಡೆಯುತ್ತಲೇ ಇರುತ್ತವೆ. (ಇದಕ್ಕೆ ರಾಜಕಾರಣದಲ್ಲಿನ ಲಾಭಗಳ ಕಾರಣವೂ ಇರಬಹುದು). ಇಂಥ ಪ್ರಯತ್ನಗಳಿಂದ ಏಕಮುಖಿ (Monolythic) ಯಾದ ಸಂರಚನೆಗಳು ಅನಾವರಣಗೊಳ್ಳದೆ ಸುಮ್ಮನಿರುವುದಿಲ್ಲ. ಇದರಿಂದ ಗತ(Past)ದ ಬಗೆಗೆ, ಭಾಷೆ-ಸಂಸ್ಕೃತಿಗಳ ಬಗೆಗೆ ಆಯಾ ಭಾಷಿಕರಲ್ಲಿ ಅಭಿಮಾನ-ಉತ್ಸಾಹ-ಅತಿರೇಕಗಳು ಅತಿಯಾಗಿ ಜಾಗೃತ ಆಗುತ್ತವೆ. ಇಂಥ ಸನ್ನಿವೇಶದಲ್ಲಿ ಬೇರೆ ಯಾವುದೇ ಭಾಷೆ-ಸಂಸ್ಕೃತಿಗಳನ್ನು ಹೇರುವವರನ್ನು ವಿರೋಧಿ ನೆಲೆಗಳಿಂದ ಗ್ರಹಿಸುವುದು ಸಹಜ. ಇಲ್ಲಿ ಶಾಂತ-ಸಮಚಿತ್ತತೆ ಕೆಲಸಕ್ಕೆ ಬರುವುದು ವಿರಳ. ಹೀಗಾಗಿ ಅನೇಕ ಚಿಂತನೆ, ಸವಾಲುಗಳನ್ನು ಪ್ರತಿರೋಧಿಸುವ ಪ್ರಯತ್ನಗಳು ಅಸ್ತಿತ್ವಕ್ಕೆ ಬರುತ್ತಿರುತ್ತವೆ. ಈ ರೀತಿಯ ಪ್ರತಿರೋಧಗಳು ಕೆಲವೊಮ್ಮೆ ಸಹಜ ಶಾಂತವಾಗಿಯೂ, ಅನೇಕ ಸನ್ನಿವೇಶಗಳಲ್ಲಿ ಉದ್ವಿಗ್ನತೆ, ದ್ವೇಷ-ರೋಷಗಳಲ್ಲಿಯೂ ಕೊನೆಗೊಳ್ಳುವುದುಂಟು. ಉದಾರವಾಗಿ ಪ್ರತಿಭಟಿಸುವ ಚಿಂತನೆ-ಧೋರಣೆಗಳು ಹತೋಟಿ ಮೀರಿ ಉಗ್ರವಾದ ನಿಲುವು-ಪ್ರಯತ್ನಗಳಲ್ಲಿ ಮುಕ್ತಾಯ ಆಗುವ ಸಾಧ್ಯತೆಗಳೇ ಹೆಚ್ಚು. ಇಂಥ ಸಂದರ್ಭಗಳಲ್ಲಿ ಹುಟ್ಟಿಕೊಳ್ಳುವ 'ಭಾಷಿಕ ಚಳವಳಿ'ಗಳನ್ನು ಅಧ್ಯಯನ ಮಾಡುವಾಗ ಎಚ್ಚರ ಇರಬೇಕಾಗುತ್ತದೆ. ಅಂತೆಯೆ ಅಂಥ ಸಂಘಟನೆಗಳ ಬಗೆಗೂ ಸಹ. ಭಾವಾವೇಶಗಳಲ್ಲಿ ಹುಟ್ಟಿಕೊಂಡ ಸಂಘಟಿತ ಚಳವಳಿ ಪ್ರಕ್ರಿಯೆಗಳನ್ನು (ಅಥವಾ ಸಹಜವಾದ ಕಾಳಜಿಯಿಂದ ಸಂಘಟಿತವಾದ ಭಾಷಾ ಸಂಬಂಧಿ ಚಳವಳಿಯ ಅಭಿವ್ಯಕ್ತಿಗಳನ್ನು) ವೈಜ್ಞಾನಿಕವಾದ ವಸ್ತುನಿಷ್ಠ ಅಧ್ಯಯನಕ್ಕೆ ಒಳಪಡಿಸಬೇಕಾಗಿರುತ್ತದೆ. ಕೆಲವೊಮ್ಮೆ ಸಹಜ ಹಾಗೂ ನೇರವಾದ ಭಾಷಾ ಪ್ರತಿಭಟನೆಗಳಷ್ಟೆ ಅಲ್ಲದೆ ಅತಿರೇಕದ ಚಳವಳಿಗಳು ಸಹ ಪ್ರಧಾನ ಆಗಿ ಬಿಡಬಹುದು. ಏಕೆಂದರೆ ಹಿಂಸಾಸ್ವರೂಪದ ಅಭಿವ್ಯಕ್ತತೆಯ ಕಾರಣಗಳನ್ನು ಅರಿಯುವುದರ ಮೂಲಕ ಎಚ್ಚರವನ್ನು ವಹಿಸಲು ಸಾಧ್ಯ ಇದೆ. ಈ ನಿಟ್ಟಿನಲ್ಲಿ ಸರ್ಕಾರಿ ಆಡಳಿತ ಯಂತ್ರಕ್ಕೆ ಅನೇಕ ರೀತಿಯ ಸವಾಲುಗಳನ್ನು ಎದುರಿಸಲು ಅನುಕೂಲ ಆಗಬಹುದು. ಅಂದರೆ ಭಾಷಿಕ ದ್ವೇಷ-ಅಸೂಯೆ-ಗಲಭೆಗಳನ್ನು ನಿಯಂತ್ರಿಸುವ ನಿಟ್ಟಿನಲ್ಲಿ. ಕನ್ನಡದ ಸಂದರ್ಭದಲ್ಲಿ ಕನ್ನಡ ಭಾಷೆಗೆ ಸಲ್ಲಬೇಕಾದ ಪ್ರಾತಿನಿಧ್ಯ, ಜನರ ಹಕ್ಕೊತ್ತಾಯಗಳನ್ನು ಈಡೇರಿಸಲು ಸರ್ಕಾರವು ಇದುವರೆಗೂ ಅನೇಕ ಪ್ರಯತ್ನಗಳನ್ನು ಮಾಡಿರುವುದನ್ನು ಇಲ್ಲಿ ಪ್ರಾಸಂಗಿಕವಾಗಿ ಉದಾಹರಿಸಬಹುದು. ಆದರೆ ಭಾಷೆ, ಭಾಷಾ ಸಂಬಂಧಿ ಚಳವಳಿಗಳಿಗೆ ಸಂಬಂಧಿಸಿದಂತೆ ನೇಮಕ ಆಗಿರುವ ಆಯೋಗಗಳು, ಅವುಗಳ ಕಾರ್ಯ ನಿರ್ವಹಣೆ, ವರದಿ ಮಂಡನೆ ಹಾಗೂ ಅವುಗಳ ಅನುಷ್ಠಾನದಲ್ಲಿ ತೆಗೆದುಕೊಳ್ಳಲಾದ ನಿರ್ಣಯಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕಾದ ಜರೂರು ಇದೆ. ಇದರಿಂದ ಕೆಲವು

ಪ್ರಮುಖ ತಾಂತ್ರಿಕ ದೋಷಗಳನ್ನು ಬಗೆಹರಿಸಿಕೊಳ್ಳಲು ಸಾಧ್ಯ.

ಭಾಷಾ ನೆಲೆಯಿಂದ ಹೊರಹೊಮ್ಮಿದ ನಿರ್ಣಯಗಳ ಸಾಕಾರತೆಯಲ್ಲಿ ತಾರತಮ್ಯ, ಮಂದಗತಿ, ಪಕ್ಷಪಾತ ಧೋರಣೆ ಇತ್ಯಾದಿಗಳನ್ನು ಆಯಾ ಭಾಷಿಕ ಸಮುದಾಯ ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ಆ ಸಮುದಾಯವು ತನ್ನದೇ ಆದ ಸಂವೇದನೆ-ಉತ್ಸಾಹ-ಕಾತುರತೆಗಳನ್ನು ಕಾಯ್ದಿರಿಸಿಕೊಂಡಿರುತ್ತದೆ. ಇಂಥ ಸನ್ನಿವೇಶದಲ್ಲಿ ಸಂಘಟನೆಯ ರೂಪಗಳು, ಪ್ರಯತ್ನಗಳು ಚಳವಳಿ ಹಂತವನ್ನು ತಲುಪುವುದುಂಟು. ತಮ್ಮ ಭಾಷೆಗೆ ಎಲ್ಲ ರೀತಿಯ ಪ್ರಾತಿನಿಧ್ಯಗಳನ್ನು ದಕ್ಕಿಸಿಕೊಳ್ಳುವ ವಿಚಾರದಲ್ಲಿ ನಡೆಯುವ ಚಿಂತನೆ, ಪ್ರಯತ್ನಗಳನ್ನು ಆಯಾ ಭಾಷಿಕರು ಅವರವರ ಭಾಷಾ ಹೋರಾಟ, ಭಾಷಾ ಚಳವಳಿಯ ರೂಪಗಳಲ್ಲಿ ವ್ಯಾಖ್ಯಾನಿಸಿ, ನಿರ್ವಚಿಸಿಕೊಳ್ಳುತ್ತಾರೆ. ಉದಾಹರಣೆಗೆ ಕನ್ನಡದ ಸಂದರ್ಭದಲ್ಲಿ ಅದು 'ಕನ್ನಡ ಚಳವಳಿ', 'ಕನ್ನಡ ಹೋರಾಟ' ಎಂದು ಅಭಿವ್ಯಕ್ತಗೊಳ್ಳುತ್ತದೆ. ಈ ನೆಲೆಗಳಲ್ಲಿ ತೊಡಗಿಸಿಕೊಂಡವರನ್ನು ಚಳವಳಿಕಾರರನ್ನಾಗಿ, ಹೋರಾಟಗಾರರನ್ನಾಗಿ, ಚಿಂತಕರನ್ನಾಗಿ ಗುರುತಿಸಬಹುದು. ಇವರ ವಿಚಾರಗಳಲ್ಲಿ ಅಥವಾ ಪ್ರಯತ್ನಗಳಲ್ಲಿ ಅಡಗಿರುವ ತಾತ್ವಿಕತೆಯನ್ನು ಸಹ ಅಧ್ಯಯನಕ್ಕೆ ಒಳಪಡಿಸುವ ಜರೂರು ಇದೆ.

ಭಾಷಾ ಸಂಬಂಧಿ ಪ್ರತಿಭಟನೆಗಳು ಆಯಾ ಸಂದರ್ಭಗಳಿಗನುಗುಣವಾಗಿ ಶಾಂತವಾಗಿಯೂ, ಸಾಂಕೇತಿಕವಾಗಿಯೂ ನಡೆಯುತ್ತವೆ. ಜನಮಂದೆ(Mob)ಯು ತನ್ನ ಸ್ಥಿಮಿತತೆಯನ್ನು ಕಳೆದುಕೊಂಡಾಗ ಹಿಂಸೆಯ ಸ್ವರೂಪವನ್ನು ತಾಳಬಹುದು. ಅಂದರೆ ಇಲ್ಲಿ 'ಹಿಂಸೆ' ಹಾಗೂ 'ಹಿಂಸೆಯನ್ನು ಹೊರತುಪಡಿಸಿದ' - ಎರಡೂ ನೆಲೆಗಳು ಪ್ರಧಾನ ಆಗಿರುತ್ತದೆ. ಆದ್ದರಿಂದ ಕನ್ನಡ ಚಳವಳಿಗಳಿಗೆ, ಹಿಂಸೆ ಹಾಗೂ ಅಹಿಂಸಾ ಸ್ವರೂಪದ ಹಿಂದೆ ಅಡಗಿರುವ ವಿವರಣೆಗಳ ಮೂಲಕ ತಾತ್ವಿಕ ಭೂಮಿಕೆಯೊಂದನ್ನು ರೂಪಿಸಿಕೊಳ್ಳಬೇಕಿದೆ. ಆ ಮೂಲಕ ಕನ್ನಡಿಗರ ಮನೋಚಿಂತನೆ, ಪ್ರತಿಕ್ರಿಯೆ- ಪ್ರತಿಭಟನೆಗಳನ್ನು ಆಯಾ ಚಾರಿತ್ರಿಕ ಸಂದರ್ಭಗಳಲ್ಲಿನ ತುರ್ತು-ಒತ್ತಡಗಳಿಗನುಗುಣವಾಗಿ ಅಧ್ಯಯನ ಮಾಡಲು ಸಾಧ್ಯವಿದೆ. ಈ ನಿಟ್ಟಿನಲ್ಲಿ ಕೆಲವು ಕನ್ನಡ ಚಳವಳಿಗಳನ್ನು ಪ್ರಾಸಂಗಿಕವಾಗಿ ದಾಖಲಿಸಿ, ವಿವರಣೆ-ವಿಶ್ಲೇಷಣೆಗಳೊಂದಿಗೆ ಅಧ್ಯಯನಕ್ಕೆ ಒಳಪಡಿಸುವುದು ಇಲ್ಲಿನ ಆಶಯ

❑❑

## ೨.೧.೧ ಕನ್ನಡ ಚಳವಳಿಯ ಚಾರಿತ್ರಿಕ ಹಿನ್ನೆಲೆ

ಆಂಗ್ಲರ ವಸಾಹತುಶಾಹಿ ಧೋರಣೆಗಳು ಕನ್ನಡ ಮಾತನಾಡುವ ಭೂಪ್ರದೇಶಗಳನ್ನು ಇಪ್ಪತ್ತೆರಡು ವಿಭಾಗಗಳಲ್ಲಿ ವಿಭಜಿಸಿದ್ದವು. ಹೀಗೆ ವಿಭಜಿತವಾಗಿದ್ದ ಕನ್ನಡ ಭೂ ನೆಲೆಗಳಲ್ಲಿನ ಕನ್ನಡಿಗರು ವಿಭಿನ್ನ ಭಾಷಿಕ ಸಮುದಾಯಗಳ ಒತ್ತಡ, ಪ್ರಭಾವಗಳಿಂದ ಬಾಳ್ವೆ ನಡೆಸುವಂತೆ ಆಗಿತ್ತು. ಈ ನಿಟ್ಟಿನಲ್ಲಿ ಕನ್ನಡಿಗರು ಒಂದೇ ಆಡಳಿತದ ಪರಿಧಿಗೆ ಬರಲು ಹಾತೊರೆದದ್ದು ಅನಿವಾರ್ಯ. ಸ್ಥಳೀಯ ಅವಮಾನ, ಆತಂಕಗಳನ್ನು ತಮ್ಮದೇ ಆದ ರೀತಿಯಲ್ಲಿ ಪ್ರತಿರೋಧ ಗಳಿಗೆ ಒಳಪಡಿಸಿದ ಕನ್ನಡಿಗರು ಆ ಮೂಲಕ ಕನ್ನಡದ ಅನನ್ಯತೆಯನ್ನು ಗುರುತಿಸಿಕೊಳ್ಳಲು ಪ್ರಯತ್ನಿಸಿದರು. ಸಾಹಿತ್ಯಕ ಸಾಂಸ್ಕೃತಿಕ ನೆಲೆಗಳ ಹಿನ್ನೆಲೆಯಲ್ಲಿ ಕನ್ನಡ ಪ್ರದೇಶಗಳ ಒಗ್ಗೂಡುವಿಕೆಯ ಅನಿವಾರ್ಯತೆಯನ್ನು ಮನವರಿಕೆ ಮಾಡಿಕೊಟ್ಟವರು ಅಂದಿನ ಸೃಷ್ಟಿಶೀಲ ಸಾಹಿತಿಗಳು ಮತ್ತು ಕಲಾವಿದರು. ಇವರು ಹಾಕಿಕೊಟ್ಟ ತಳಹದಿಯ ಮೇಲೆಯೆ ರಾಜಕಾರಣಿಗಳು ತಮ್ಮ ಚಟುವಟಿಕೆಗಳನ್ನು ರೂಪಿಸಿಕೊಂಡಿದ್ದು. ಅಂತೆಯೆ ಕ್ರಿಯಾಶೀಲರೂ ಆದರು. ಆದರೆ ರಾಜಕಾರಣಿಗಳು ಮುನ್ನಡೆ ಸೃಜನಶೀಲ ಪ್ರತಿಕ್ರಿಯೆಯಷ್ಟು ಗಟ್ಟಿಯಾದುದು ಆಗಿರಲಿಲ್ಲ. ಹೀಗಾಗಿ ಆಗಾಗ ಗೊಂದಲ, ಅಸಮಧಾನ, ಪ್ರತ್ಯೇಕತೆಯ ಕೂಗುಗಳು ಕೇಳಿಸುವಂತೆ ಆಯಿತು. ಇಂಥ ಒಡಕು ಧ್ವನಿಗಳನ್ನು ಹೋಗಲಾಡಿಸಿ ಕನ್ನಡಿಗರನ್ನು ಏಕೀಭವಿಸಲು ಪ್ರಯತ್ನಿಸಿದ್ದು ಅಂದಿನ ಸೃಜನಶೀಲರು ಹಾಗೂ ಅವರ ಚಟುವಟಿಕೆಗಳು.

ಕನ್ನಡದ ಪ್ರದೇಶಗಳು ೧೯೫೬ರ ನವೆಂಬರ್ ಒಂದರಂದು ಏಕೀಕೃತಗೊಂಡದ್ದು ಚರಿತ್ರೆಗೆ ಸೇರಿಹೋದ ಸಂಗತಿ. ಈ ಚಾರಿತ್ರಿಕ ಘಟನೆಗೆ ಅಂದರೆ ಏಕೀಕರಣಕ್ಕೆ ಒಳಗಾದ ಕನ್ನಡಿಗರ ಮನೋಚಿಂತನೆಗಳು ಏಕರೀತಿಯ ಆಶಯವನ್ನು ಹೊಂದಿರಲಿಲ್ಲ. ಬದಲಾಗಿ ಆಯಾ ಸ್ಥಾನಿಕ ಅಭಿರುಚಿಗಳಿಗೆ ಅನುಗುಣವಾಗಿ ಪ್ರಭಾವಿತವಾಗಿದ್ದವು. 'ಏಕತ್ರ'ಗೊಳ್ಳುವುದ ರೊಂದಿಗೆ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ನೆಲೆಗಳಲ್ಲಿ ಹಲವು ಸಾಧನೆಗಳನ್ನು ಕಂಡುಕೊಳ್ಳುವಲ್ಲಿ ಹಾತೊರೆದಿದ್ದರು. ಹೀಗಾಗಿ ಭಾಷಿಕವಾಗಿ ಒಂದೂಗೂಡುವುದು ಮುಖ್ಯ ಆಗಿತ್ತು. ಏಕೆಂದರೆ ಮುಂಬಯಿ, ಮದರಾಸು, ಮೈಸೂರು, ಹೈದರಾಬಾದ್ ಮತ್ತು ಕೊಡಗು ಆಡಳಿತ ಘಟಕಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡಿಗರು ಭಾಷಿಕವಾಗಿ ಅಷ್ಟೆಯಲ್ಲದೆ ಸಾಂಸ್ಕೃತಿವಾಗಿಯೂ ಆಘಾತಕ್ಕೆ ಒಳಗಾಗಿದ್ದರು. ಮರಾಠಿ, ತಮಿಳು, ತೆಲುಗು, ಉರ್ದು, ಮಲೆಯಾಳ, ಗುಜರಾಥಿ, ಬಂಗಾಳಿ, ಹಿಂದಿ, ಇಂಗ್ಲಿಷ್ ಮೊದಲಾದ ಭಾಷೆ-ಭಾಷಿಕರ ನಡುವೆ ಕನ್ನಡದ ಪ್ರಜ್ಞೆ ಒಡಮೂಡುವುದು ಸುಲಭದ ಮಾತಾಗಿರಲಿಲ್ಲ. ಕನ್ನಡ ನಾಡು, ನುಡಿ, ಸಾಹಿತ್ಯ, ಚರಿತ್ರೆ, ಸಂಸ್ಕೃತಿಗಳು ಭಿನ್ನ ಭಾಷಿಕರ ಒತ್ತಡಗಳಿಂದಾಗಿ ವಿಭಿನ್ನ ಅವಸ್ಥಾಂತರಗಳಿಗೆ ಗುರಿಯಾಗಿದ್ದವು.

ತಮ್ಮತನದ ಅರಿವನ್ನು ಮೂಡಿಸಲು ನಮ್ಮಲ್ಲಿದ್ದ ಪರಿಕರವೆಂದರೆ ಕನ್ನಡ ಬಾಷೆಯೊಂದೆ.

ಒಂದು ಭಾಷೆಯನ್ನು ಆಡುವ ಜನರು ನಿಗದಿತ ಭೂ ಪರಿಸರದಲ್ಲಿ ಒಂದುಗೂಡುವುದರೊಂದಿಗೆ ಕನ್ನಡ ಭಾಷೆ, ಕನ್ನಡ ಜನ, ಕರ್ನಾಟಕ ಪ್ರದೇಶಗಳ ಸಾಕಾರತೆ ಏಕೀಕರಣದೊಂದಿಗೆ ರೂಪುಗೊಂಡಿತು. ಕನ್ನಡಿಗರಲ್ಲಿ ಅಂತರ್ಗತವಾಗಿದ್ದ ವಿಭಿನ್ನ ಅಭಿರುಚಿ, ಸಂಸ್ಕೃತಿ ವಿಚಾರಗಳು ಪ್ರಧಾನ ಧಾರೆಗೆ ಬಂದದ್ದು 'ಭಾಷೆ'ಯೊಂದರಿಂದಲೇ. ಕನ್ನಡ ಭಾಷೆ, ಸಂಸ್ಕೃತಿ ವಿಚಾರಗಳು ಕನ್ನಡಿಗರ ಭಾವನಾತ್ಮಕ ವಿಚಾರಗಳಾಗಿ ಅಂತರ್ಗತ ಆಗಿದ್ದವು. ಆದರೆ ರಾಜಕಾರಣಿಗಳ ಸ್ವಾರ್ಥ, ಲಾಭ, ಸಂಕುಚಿತ ಮನೋಭಾವನೆಗಳಿಂದ ಜಾತಿ, ಪ್ರದೇಶ, ಅಧಿಕಾರ, ಪ್ರಾತಿನಿಧ್ಯ, ಆರ್ಥಿಕ ವಿಚಾರಗಳಂಥ ಅಸಮಧಾನಗಳು ಸುಳಿಯುವಂತೆ ಆಯಿತು. ಈ ಅಸಮಧಾನಗಳನ್ನು ಮೆಟ್ಟಿಹಾಕುವಲ್ಲಿ ಏಕೀಕರಣದ ನಂತರವೂ ಕನ್ನಡದ ಸೃಷ್ಟಿಶೀಲ ಜಗತ್ತು ಪ್ರಯತ್ನಿಸಿದೆ. ಆದರೆ ನಿರೀಕ್ಷೆ ಮಾಡಿದ್ದ ಆಶಯವನ್ನು ಸಾಧಿಸಲು ಆಗಲಿಲ್ಲ. ಆದ್ದರಿಂದಲೇ ಈ ಹೊತ್ತಿಗೂ ಪ್ರತ್ಯೇಕತೆಯ ಒಡಕು ಧ್ವನಿಗಳು ಕೇಳಿಬರುತ್ತಿರುವುದು. ಈ ರೀತಿಯ ಒಡಕು ಧ್ವನಿಗಳಿಂದ ನಾಡಿನ ಎಲ್ಲ ಪ್ರದೇಶಗಳಲ್ಲಿನ ಕನ್ನಡಿಗರು ಭಾವನಾತ್ಮಕವಾಗಿ ಒಂದುಗೂಡಿಲ್ಲ ಎಂಬ ಆಪಾದನೆ ಇದೆ. ಇದು ವಾಸ್ತವವೂ ಹೌದು. ಹೀಗಾಗಿ ಏಕೀಕರಣ ಆಗಿ ನಾಲ್ಕು ದಶಕಗಳೇ ಕಳೆದಿದ್ದರೂ ಈ ಹೊತ್ತಿಗೂ ನಮ್ಮಲ್ಲಿ ಭಿನ್ನ ಭಾಷಿಕರ ಪ್ರಾಬಲ್ಯ, ಒತ್ತಡಗಳು ಕೊನೆಗೊಂಡಿಲ್ಲ. ಅಂತೆಯೆ ಆತಂಕ, ಅವಮಾನಗಳೂ ಕಡಿಮೆ ಆಗಿಲ್ಲ. ಇಂಥ ಪ್ರಾಬಲ್ಯ, ಒತ್ತಡ, ಆತಂಕಗಳು ರಾಜ್ಯದ ಎಲ್ಲೆಡೆಗೂ ವಿಭಿನ್ನ ರೀತಿಗಳಲ್ಲಿ, ವಿವಿಧ ಪ್ರಮಾಣಗಳಲ್ಲಿ ಅಭಿವ್ಯಕ್ತ ಆಗುತ್ತಿವೆ. ಮರಾಠಿ, ತಮಿಳು, ತೆಲುಗು, ಮಲೆಯಾಳ ಮೊದಲಾದ ಭಾಷೆಗಳು ಹಾಗೂ ಭಾಷಿಕರು ಏಕೀಕೃತ ಗೊಂಡಿರುವ ಕರ್ನಾಟಕಲ್ಲೂ ಹಿಂದಿನಂತೆಯೆ ರಾರಾಜಿಸುತ್ತಿರುವುದು ಉಂಟು. ಇದರಿಂದ ಕನ್ನಡ ಭಾಷೆ ಮತ್ತು ಕನ್ನಡಿಗರ ಅಸ್ತಿತ್ವವನ್ನೇ ಪ್ರಶ್ನಿಸುವಂತೆ ಆಗಿದೆ. ಈ ಸವಾಲುಗಳ ಜೊತೆಗೆ ಹಿಂದಿ ಸಾಮ್ರಾಜ್ಯಶಾಹಿಗಳ ಹಾಗೂ ಇಂಗ್ಲಿಷ್ ವಸಾಹತುಶಾಹಿ ಧೋರಣೆ ಉಳ್ಳವರ ಹಿಂದಿ-ಇಂಗ್ಲೀಷ್ ಭಾಷೆಗಳ ಹೇರಿಕೆಯನ್ನೂ ಸಹಿಸಿಕೊಳ್ಳಬೇಕಾಗಿದೆ. ಇಂಥ ಹೇರಿಕೆ, ಒತ್ತಡಗಳು ಕನ್ನಡತನವನ್ನು ಆಘಾತಗೊಳಿಸದೆ ಇಲ್ಲ. ಇದರಿಂದ ಕನ್ನಡಿಗರೂ ತಮ್ಮ ಭಾಷೆ, ಸಂಸ್ಕೃತಿಗಳ ಅನನ್ಯತೆಯನ್ನು ಸಾಕಾರಗೊಳಿಸಿ ಸಾಬೀತುಪಡಿಸುವುದು ಸುಲಭ ಅನ್ನಿಸಿಲ್ಲ. ಈ ಎಲ್ಲದರ ಹಿನ್ನೆಲೆಯಲ್ಲಿ 'ಕನ್ನಡ ಚಳವಳಿ'ಯು ಹಲವು ಪ್ರಕ್ರಿಯೆಗಳ ಮುಖೇನ ಪ್ರಧಾನ ಧಾರೆಗೆ ಬರುವಂಥ ಚಾರಿತ್ರಿಕ ತುರ್ತನ್ನು ಏಕೀಕರಣದ ನಂತರವೂ ಅನಿವಾರ್ಯವಾಗಿ ಪಡೆದುಕೊಂಡಿತು.

ಕರ್ನಾಟಕವು ಏಕೀಕರಣಗೊಂಡ ಚಾರಿತ್ರಿಕ ಸಂದರ್ಭ ಹಾಗೂ ಅನಂತರದ ಸ್ಥಿತಿ-ಗತಿಗಳು 'ಕನ್ನಡ ಚಳವಳಿ'ಯ ಚರಿತ್ರೆಯಲ್ಲಿ ಪ್ರಧಾನವಾದುವು. ಈ ಎರಡೂ ಘಟ್ಟಗಳು ಚಳವಳಿಯ ಅರ್ಥ ಮತ್ತು ಅದರ ನಿರ್ದಿಷ್ಟ ಸ್ವರೂಪವನ್ನು ಅಭಿವ್ಯಕ್ತಿಸುವುದರೊಂದಿಗೆ ಬೆಸೆದುಕೊಂಡಿವೆ. ಅಂದರೆ ಒಂದು ಚಳವಳಿಯನ್ನು 'ಕನ್ನಡ ಚಳವಳಿ' ಎಂದು ಕರೆಯಲು ಬೇಕಾದ ಹಿನ್ನೆಲೆ, ಅರ್ಥ, ಮಾನದಂಡ, ವ್ಯಾಪ್ತಿಗಳ ನಿರ್ವಚನೆಗೆ ಅನುವು ಮಾಡಿಕೊಡುತ್ತವೆ. ಈ ಅರ್ಥ ಪರಿಧಿಗೆ ಬರುವ ಚಳವಳಿಗಳನ್ನು ನಿಖರವಾಗಿ ಇಂತಿಷ್ಟೇ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಇದುವರೆಗೂ ನಡೆದಿರುವ ಚಳವಳಿಗಳು ಅಥವಾ ಚಾಲ್ತಿಯಲ್ಲಿ ಇರುವಂಥವು ಭಿನ್ನವಾದ ಸ್ವರೂಪಗಳನ್ನು ತಳೆಯುವ ಉದಾಹರಣೆಗಳೂ ಇರುವುದರಿಂದ. ಕೆಲವು 'ಕನ್ನಡ'ದ ಕಾಳಜಿಯಿಂದಲೇ ಅಸ್ತಿತ್ವಕ್ಕೆ ಬಂದ ಚಳವಳಿಗಳು ಕ್ರಮೇಣ ಅದರಿಂದ

(ಕನ್ನಡದಿಂದ) ದೂರ ಉಳಿದ ಸನ್ನಿವೇಶಗಳೂ ಉಂಟು. ಮತ್ತೆ ಕೆಲವು ವೈಯಕ್ತಿಕ ನೆಲೆಯಿಂದ ಅಥವಾ ವಿಚಾರದಿಂದ ಹೊರಟಂಥ ಪ್ರತಿಕ್ರಿಯೆ, ಪ್ರತಿಭಟನೆಗಳು ಕ್ರಮೇಣ 'ಕನ್ನಡ'ದ ಹೆಸರಿನಲ್ಲಿ ಅಂತ್ಯಗೊಂಡಿರುವ ಉದಾಹರಣೆಗಳೂ ಇಲ್ಲದಿಲ್ಲ. ಇಲ್ಲಿ ಮುಖ್ಯವಾಗಿ 'ಕನ್ನಡಿಗರ ಪ್ರತಿಭಟನೆ', 'ಕನ್ನಡಿಗರ ಪ್ರಾತಿನಿಧ್ಯ, ಅಸ್ತಿತ್ವದ ಪ್ರಶ್ನೆ', 'ಕನ್ನಡ ಹೋರಾಟ', 'ಭಾಷಿಕ ಚಳವಳಿ' 'ಕನ್ನಡಿಗರ ಸ್ವಾಭಿಮಾನದ ಪ್ರಶ್ನೆ,' 'ಕನ್ನಡಿಗರ-ಕರ್ನಾಟಕದ ಅಳಿವು -ಉಳಿವಿನ ಪ್ರಶ್ನೆ' ಯಂಥ ನೆಲೆಗಳಿಂದ ಹೊರಹೊಮ್ಮಿದ ಚಳವಳಿಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ಪರಿಗಣನೆಯಲ್ಲಿ ಮೂರು ಪ್ರಮುಖ ಪರಿಕಲ್ಪನೆಗಳೇ ಮತ್ತೆ ಪ್ರಧಾನ ಆಗುತ್ತವೆ. ಅವೆ ಕನ್ನಡ-ಕನ್ನಡಿಗ-ಕರ್ನಾಟಕ ಎಂಬಂಥವು. ಅಂದರೆ ಇಲ್ಲಿ ನಿರ್ದಿಷ್ಟ ಭಾಷೆ, ಆ ಭಾಷೆಯನ್ನು ಆಡುವ ಜನ ಹಾಗೂ ಅವರು ವಾಸಿಸುವ ಭೌಗೋಳಿಕ ಪರಿಸರ ಮುಖ್ಯ ಆಗಿರುತ್ತವೆ.

ಕನ್ನಡಿಗ-ಕರ್ನಾಟಕಗಳು ಅವು ಅಭಿವ್ಯಕ್ತಿಸುವ ಭಾಷಿಕ ಮಾಧ್ಯಮದಿಂದಲೇ (ಕನ್ನಡ) ಅಸ್ತಿತ್ವವನ್ನು ಪಡೆಯುತ್ತವೆ. ಹೀಗಾಗಿ 'ಭಾಷೆ' ಇವೆರಡಕ್ಕಿಂತಲೂ (ಜನ ಮತ್ತು ಪ್ರದೇಶ) ಪ್ರಧಾನ ಹಾಗೂ ಸೂಕ್ಷ್ಮವಾದುದು. ಭಾಷಾ ಸಂಬಂಧಿ ಭಾವನೆಗಳು ಹೆಚ್ಚು ಆತ್ಮಿಕವೂ, ಸಂಕೀರ್ಣವೂ ಆಗಿರುತ್ತವೆ. ಆದ್ದರಿಂದಲೆ 'ಭಾಷೆ'ಯೊಂದರ ವೈಜ್ಞಾನಿಕವಾದ ಚಹರೆಗಿಂತಲೂ ಅದರ ಸಾಂಸ್ಕೃತಿಕವಾದ ಚಹರೆ ಪ್ರಧಾನವಾಗಿ ನೆಲೆಗೊಳ್ಳುವುದು. ಈ ವಿವರಣೆ-ಅರ್ಥಗಳಿಂದ ಕನ್ನಡ ಚಳವಳಿಯನ್ನು ಭಾಷೆ, ವ್ಯಕ್ತಿ, ಪ್ರದೇಶಗಳಿಗೆ ಮಾತ್ರ ಸೀಮಿತಗೊಳಿಸದೆ ಅದರ ಸಾಂಸ್ಕೃತಿಕವಾದ ಎಲ್ಲೆಗಳವರೆವಿಗೂ ವಿಸ್ತರಿಸಲು ಸಾಧ್ಯ ಇದೆ. ಕನ್ನಡದ ಸಂದರ್ಭದಲ್ಲಿ ಭಾಷೆ, ವ್ಯಕ್ತಿ, ಪ್ರದೇಶ ಹಾಗೂ ಸಾಂಸ್ಕೃತಿಕ ವಿಚಾರಗಳಿಗೆ ಸಂಬಂಧಿಸಿದಂತೆ ಧಕ್ಕೆ ಒದಗಿ ಬರುವ ಯಾವುದೇ ಅಡ್ಡಿ-ಆತಂಕಗಳನ್ನು ಪ್ರತಿಭಟಿಸುವ ಪ್ರಕ್ರಿಯೆಗೆ 'ಕನ್ನಡ ಚಳವಳಿ' ಎಂದು ಕರೆಯಬಹುದು. ಬಹುಶಃ ಈ ಹಿನ್ನೆಲೆಯಲ್ಲಿಯೆ ನಮ್ಮದೇ ಆದ ಸಾಂಸ್ಕೃತಿಕ ಹಿರಿಮೆ, ಹೆಗ್ಗಳಿಕೆಗಳಿಗೆ ಹೆಚ್ಚಿನ ಮಹತ್ವ ಬಂದದ್ದು. ಭಾಷಿಕ ನೆಲೆಯ ಪ್ರತಿಕ್ರಿಯೆಗಳಿಗೆ ಗತದ ವೈಭವೀ ಪರಿಕರಗಳು ಪ್ರತಿಭಟನಾ ಅಸ್ತ್ರಗಳಾಗಿದ್ದು ಉಂಟು.

ಏಕೀಕರಣದ ಚಳವಳಿಯು ಸಹ 'ಕನ್ನಡ ಚಳವಳಿ'ಯ ಪರಿಧಿಗೆ ಬರುವಂಥದ್ದು ಎಂಬುದು ಮೇಲಿನ ವಿವರಣೆಗಳಿಂದ ತಿಳಿಯುತ್ತದೆ. ಆದರೆ ಏಕೀಕರಣ ಚಳವಳಿಯ ಆಶಯಕ್ಕೂ, ಅನಂತರದ ಚಳವಳಿಗಳಿಗೂ ಕೆಲವು ಭಿನ್ನತೆಗಳು ಇಲ್ಲದಿಲ್ಲ. ರಾಜಕೀಯವಾಗಿ ಒಂದುಗೂಡುವುದೇ ಏಕೀಕರಣವಾದರೆ, ಅನಂತರದಲ್ಲಿ ಕನ್ನಡ-ಕನ್ನಡಿಗ-ಕರ್ನಾಟಕಗಳ ಪ್ರಾತಿನಿಧ್ಯ, ಅಭಿವೃದ್ಧಿ, ಅನನ್ಯತೆಗಳಿಗೆ ನಡೆದ ಚಳವಳಿಗಳು ಕನ್ನಡದ ಚಳವಳಿಗಳಾಗಿ ರೂಪುಗೊಂಡವು.

ಕರ್ನಾಟಕವು ಏಕೀಕರಣ ಆಗುವಲ್ಲಿ ಹಳೆಯ ಮೈಸೂರು ಸಂಸ್ಥಾನಿಕರಿಗೂ ಹಾಗೂ ಉತ್ತರ ಕರ್ನಾಟಕದ ಕನ್ನಡಿಗರಿಗೂ ಇದ್ದ ಅಸಮಧಾನ, ಅಲಕ್ಷ್ಯಗಳು ಏಕೀಕರಣದ ನಂತರವೂ ಮುಂದುವವರೆದವು. ಜಾತಿ, ಅಧಿಕಾರ, ಆರ್ಥಿಕ ನೆಲೆಗಳಲ್ಲಿ ಹುಟ್ಟಿಕೊಂಡ ಗುಮಾನಿ, ಶಂಕೆ, ಆತಂಕಗಳು ಕನ್ನಡಿಗರನ್ನು ಸಂಕುಚಿತರನ್ನಾಗಿಸಿದವು. ಉತ್ತರದವರ ಪಟ್ಟುಬಿಡದ ಪ್ರಯತ್ನಗಳಿಂದ ನಾಡು ಏಕೀಕರಣವೇನೊ ಆಯಿತು. ಆದರೆ ನಾಡಿನ

ರಾಜಕಾರಣಿಗಳು ಭಾವನಾತ್ಮಕವಾಗಿ ಒಂದುಗೂಡಲೇ ಇಲ್ಲ. ಈ ಮಾತು ಕನ್ನಡದ ಸೃಷ್ಟಿಶೀಲರಿಗೆ ಅನ್ವಯ ಆಗುವುದಿಲ್ಲ. ಏಕೆಂದರೆ ನಾಡು, ನುಡಿ, ಸಂಸ್ಕೃತಿಗಳನ್ನು ಮೂಡಿಸಿದವರು ಸಾಹಿತಿ-ಕಲಾವಿದರು. ಆದರೆ ಇವನ್ನೆಲ್ಲ ಸ್ವಾರ್ಥಕ್ಕಾಗಿ ಬಳಸಿಕೊಂಡವರು ಸಂಕುಚಿತ ರಾಜಕಾರಣಿಗಳು.[೧]

ಏಕೀಕರಣದ ನಂತರ ಶಿಕ್ಷಣ, ಉದ್ಯೋಗ, ಅಧಿಕಾರ, ರಾಜಕಾರಣ, ಆರ್ಥಿಕ ಸವಲತ್ತು, ಸಾಮಾಜಿಕವಾದ ಸಮಾನತೆ, ಸಾಂಸ್ಕೃತಿಕ ಒಗ್ಗಟ್ಟು ಹೀಗೆ ಹಲವು ವಿಚಾರಗಳಲ್ಲಿ ಪ್ರಾತಿನಿಧ್ಯ, ಸಮಾನ ಅವಕಾಶಗಳು ದೊರೆಯುತ್ತವೆ ಎಂದು ಕನಸು ಕಾಣಲಾಗಿತ್ತು. ಉತ್ತರ ಕರ್ನಾಟಕದ ಕನ್ನಡಿಗರ ಈ ಕನಸು ವಾಸ್ತವದಲ್ಲಿ ಅಂದರೆ ಏಕೀಕರಣದ ಅನಂತರ ನನಸಾಗುವ ಸೂಚನೆಗಳು ಕಂಡು ಬರದೆ ಭ್ರಮನಿರಸನವನ್ನುಂಟು ಮಾಡಿದ್ದವು. ಏಕೆಂದರೆ ಏಕೀಕೃತ ನಾಡಿಗೆ 'ವಿಶಾಲ ಮೈಸೂರು' ಎಂದು ಕರೆದದ್ದು (೧೯೫೬ರಲ್ಲಿ) ಅಲ್ಲಿಯವರಿಗೆ ಅತೃಪ್ತಿಯನ್ನುಂಟು ಮಾಡಿತ್ತು. ಸಾಂಸ್ಕೃತಿಕವಾಗಿ ಬಂದಿದ್ದ 'ಕರ್ನಾಟಕ' ಎಂಬ ಹೆಸರನ್ನು ಕರೆಯದೆ ಹೋದದ್ದು ಉತ್ತರದವರಿಗೆ ಮೊಟ್ಟ ಮೊದಲ ಅಸಮಾಧಾನದ ಅಂಶ. ಆಲೂರ ವೆಂಕಟರಾಯರನ್ನು ಒಳಗೊಂಡಂತೆ ಅನೇಕರಿಗೆ ಈ ಬಗ್ಗ ಅಸಮಧಾನವಾಗದೆ ಇರಲಿಲ್ಲ. ಪತ್ರಿಕೆ, ನಿಯತಕಾಲಿಕ, ಬಾನುಲಿ ಮೊದಲಾದುವುಗಳ ಮೂಲಕವೂ ಈ ಬಗ್ಗೆ ಪ್ರತಿಭಟಿಸ ಲಾಯಿತು. ಮೈಸೂರು ವ್ಯಾಮೋಹಿಗಳ ಬಗ್ಗ ಆಲೂರರು ಶಪಿಸಿದ್ದೂ ಉಂಟು.[೨] ಅಷ್ಟೇ ಅಲ್ಲದೆ ಮೈಸೂರು ವಾದಿಗಳಿಗೆ-

> "ಭಾರತ ಸರಕಾರದ ರಾಜ್ಯ ಘಟನೆಯಂತೆ ತಾತ್ವಿಕವಾಗಿ ನಮ್ಮ ಪುನರ್ಘಟಿತವಾದ ರಾಜ್ಯವು ಒಂದುಗೂಡಿದ 'ಕರ್ನಾಟಕ'ವೇ ಹೊರತು ವಿಸ್ತರಿಸಲ್ಪಟ್ಟ ಮೈಸೂರು ಅಲ್ಲ[೩]

- ಎಂಬುದನ್ನು ಸ್ಪಷ್ಟಪಡಿಸುವ ಪ್ರಯತ್ನಗಳು ನಡೆದವು. ಆದರೆ ಇದರಿಂದ ಅನುಕೂಲಗಳೇನು ಆಗಲಿಲ್ಲ.

ನಾಮಕರಣದ ಜೊತೆ ಜೊತೆಗೆ, ಏಕೀಕರಣದ ಅನಂತರದಲ್ಲಿ ಅಸಮಧಾನ ಉಂಟುಮಾಡಿಸಿದ ಇನ್ನೊಂದು ವಿಚಾರವೆಂದರೆ ಗಡಿಗಳಿಗೆ ಸಂಬಂಧಪಟ್ಟದ್ದು. ಮಹಾರಾಷ್ಟ್ರ, ಕೇರಳ, ಆಂಧ್ರ ಪ್ರದೇಶ, ತಮಿಳುನಾಡು ರಾಜ್ಯಗಳಲ್ಲಿ ಕನ್ನಡದ ಹಲವು ಪ್ರದೇಶಗಳು ಹಂಚಿಕೆ ಆಗಿದ್ದು ಉತ್ತರ ಕರ್ನಾಟಕದ ಕನ್ನಡಿಗರಿಗೆ ತೃಪ್ತಿ ತಂದಿರಲಿಲ್ಲ. ಕನ್ನಡಿಗರು ಜತ್ತ, ಅಕ್ಕಲಕೋಟ, ಸೋಲ್ಲಾಪುರ, ಆಲೂರು, ಆದೋನಿ, ರಾಯದುರ್ಗ, ಮಡಕಶಿರಾ, ತಾಳವಾಡಿ, ಕಾಸರಗೋಡು ಮೊದಲಾದ ಕಡೆಗಳಲ್ಲಿ ಹಾಗೆಯೇ ಉಳಿದರು. ಬೇರೆ ರಾಜ್ಯಗಳಲ್ಲಿನ ಸರ್ಕಾರಗಳ ದೃಷ್ಟಿಯಲ್ಲಿ ಇಲ್ಲಿನ ಕನ್ನಡಿಗರೆಲ್ಲ ನಿರ್ಲಕ್ಷ್ಯಕ್ಕೆ ಒಳಗಾಗಬೇಕಾಯಿತು. ಇದರಿಂದ ಕನ್ನಡಿಗರ ಭವಿಷ್ಯ ಗೊಂದಲಮಯವಾಗದೆ ಇರಲಿಲ್ಲ. ಈ ಬಗ್ಗ ಮೈಸೂರಿಗರು ಅಷ್ಟಾಗಿ ಕಳವಳ ವ್ಯಕ್ತಪಡಿಸದಿದ್ದುದು ಇನ್ನುಳಿದ ಭಾಗದವರಿಗೆ ಭ್ರಮನಿರಸವನ್ನು ಉಂಟು ಮಾಡಿತ್ತು. ಚಾರಿತ್ರಿಕವಾಗಿ ಇಂಥ ಹಿನ್ನೆಲೆಗಳು ಕನ್ನಡಿಗರನ್ನು ಚಳವಳಿ ಹೂಡಲು ಪ್ರೇರಣೆ ನೀಡಿದ್ದವು.

ಮೈಸೂರು ಸಂಸ್ಥಾನಿಕರಲ್ಲಿ ಆಂತರಿಕವಾಗಿದ್ದ ಕೆಲವು ಅಡ್ಡಿ-ಆತಂಕಗಳು ಏಕೀಕರಣದ ನಂತರವು ಕಾಣಿಸಿಕೊಂಡವು. ಈ ಕಡೆಯವರಿಗೆ ಭಿನ್ನ ಭಾಷಿಕರ ಒತ್ತಡಗಳು

ಯಾವ ರೀತಿಯವು ಎಂಬುದು ಅರಿವಿಗೆ ಬಂದದ್ದು ಏಕೀಕರಣದ ಅನಂತರವೆ. ಏಕೆಂದರೆ ಅಲ್ಲಿಯವರೆಗೆ ಈ ಅನುಭವವನ್ನು ಅಷ್ಟಾಗಿ ಅನುಭವಿಸಿರಲಿಲ್ಲ. ಕೇವಲ ಬೇರೆ ಕಡೆಯ ಕನ್ನಡಿಗರಿಗೆ ಮಾತ್ರ ಈ ರೀತಿಯ ತೊಂದರೆಗಳು ಇದ್ದವು. ಬೆಂಗಳೂರನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಮೈಸೂರಿಗರು ಕನ್ನಡೇತರರ ಭಾಷಿಕ ಆಕ್ರಮಣಗಳನ್ನು ಎದುರಿಸುವಲ್ಲಿ ವಿಫಲರಾಗಿದ್ದರು. ತಮಿಳು, ತೆಲುಗು, ಮಲೆಯಾಳ, ಹಿಂದಿ (ಸ್ವಲ್ಪ ಮಟ್ಟಿಗೆ ಮರಾಠಿಗರ) ಮೊದಲಾದ ಭಾಷಿಕರ ಒತ್ತಡಗಳಿಂದ ಅನೇಕ ಸಮಸ್ಯೆ, ಅವಮಾನಗಳನ್ನು ಮೈಸೂರಿಗರು ಎದುರುಗೊಳ್ಳುವಂತೆ ಆಗಿತ್ತು. ಎಷ್ಟೋ ಮಂದಿ ಕನ್ನಡಿಗರು ಪರಭಾಷಾ ವ್ಯಾಮೋಹಗಳಿಗೆ, ಒತ್ತಡಗಳಿಗೆ ಒಳಗಾಗಿ ಕನ್ನಡತನ ವನ್ನೇ ಕಳೆದುಕೊಂಡಿದ್ದರು. ಕನ್ನಡದ ಅನುಸಂಧಾನವೆ ಕನ್ನಡಿಗರ ಪಾಲಿಗೆ ಅವಮಾನ, ಹಿಂಸೆಗಳನ್ನು ತಂದುಕೊಟ್ಟ ಸನ್ನಿವೇಶವಾಗಿ ರೂಪುಗೊಂಡಿತ್ತು. ಇಂಥ ಸಂದರ್ಭ-ಸನ್ನಿವೇಶಗಳು 'ಕನ್ನಡ ಚಳವಳಿ'ಯು ಬೆಂಗಳೂರಿನಲ್ಲಿ ಹುಟ್ಟಿಕೊಳ್ಳಲು ಅನುವು ಮಾಡಿಕೊಟ್ಟವು.

**ಟಿಪ್ಪಣಿಗಳು**

೧. ಹೆಚ್ಚಿನ ವಿವರಣೆಗಳಿಗೆ ನೋಡಿ, ಸಿ. ಆರ್. ಗೋವಿಂದರಾಜು, ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, (ಬೆಂ. ೧೯೯೮).

೨. ಆಲೂರ ವೆಂಕಟರಾವ್., ಕರ್ನಾಟಕತತ್ವದ ವಿಕಾಸ, (ಧಾ, ೧೯೫೭), ಪುಟ ೯, ೨೩-೨೫.

೩. ಸತ್ಯನಾರಾಯಣ., 'ನಮ್ಮ ಕನಸಿನ ಕರ್ನಾಟಕವೆಂದು?', 'ಪ್ರಪಂಚ' (ಹುಬ್ಬಳ್ಳಿ) ನಿಯತಕಾಲಿಕದಲ್ಲಿ ೨೮-೧-೧೯೬೨ರಂದು ಪ್ರಕಟವಾಗಿರುವ ಲೇಖನ. ಈ ಕುರಿತು ಆಲೂರ ವೆಂಕಟರಾಯರು ಸಹ ಹಲವು ಕಡೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ.



## ೩.೧.೧ ಸೈದ್ಧಾಂತಿಕ ಪ್ರೇರಣೆ ಹಾಗೂ ಒತ್ತಡಗಳು

ಕನ್ನಡ ಚಳವಳಿಗೆ ತನ್ನದೇ ಆದ ಸಾಹಿತ್ಯಕ ಹಿನ್ನೆಲೆ, ಪರಂಪರೆ ಇದೆ. ಶತಮಾನಗಳಿಂದಲೂ ನಾಡು-ನುಡಿ ಬಗೆಗಿನ ಪ್ರಜ್ಞೆ, ಕಾಳಜಿಗಳು ಸಾಹಿತ್ಯಕ ಪ್ರೇರಣೆಗಳಾಗಿ ಕನ್ನಡ ಚಳವಳಿಯನ್ನು ತಾತ್ತ್ವಿಕವಾಗಿ ಗಟ್ಟಿಮಾಡಿವೆ. ಆದರೆ ಈ ಶತಮಾನದ ಉತ್ತರಾರ್ಧದಲ್ಲಿನ ಕನ್ನಡ ಚಳವಳಿ ಸ್ವರೂಪಕ್ಕೂ, ಹಿಂದಿನ ಅಭಿವ್ಯಕ್ತಿಗಳಿಗೂ ಭಿನ್ನತೆಗಳು ಇಲ್ಲದಿಲ್ಲ. ಸಮಕಾಲೀನ ಸಂದರ್ಭಕ್ಕನುಗುಣವಾಗಿ ಕನ್ನಡದ ಪ್ರತಿಭಟನೆಗಳು ಅಭಿವ್ಯಕ್ತಿಗೊಳ್ಳುತ್ತ ಬಂದಿರುವುದಕ್ಕೆ ಸಾಕಷ್ಟು ದಾಖಲೆಗಳು ದೊರೆಯುತ್ತವೆ. ಆದರೆ ಅವು ಈ ಹೊತ್ತಿನ ಚಳವಳಿ ಮಾದರಿಯ ಭಾಷಣ, ಘೋಷಣೆ, ಕರಪತ್ರ, ಹಿಂಸೆಗಳ ಸ್ವರೂಪದ ರೀತಿಯದ್ದಲ್ಲ. ಬದಲಾಗಿ ಸಾಹಿತ್ಯ ಕೃತಿಗಳ ಚಿಂತನೆಗಳ ಮೂಲಕ. ಕನ್ನಡದಲ್ಲಿ ಈ ಬಗೆಯ ಸಾಹಿತ್ಯ ಚಿಂತನೆಯನ್ನು ನಡೆಸಿದ್ದೇ ಒಂದು ನಿಟ್ಟಿನಲ್ಲಿ ನುಡಿ ಅಥವಾ ಭಾಷಾ ವಿಸ್ತರಣೆಯ ಚಳವಳಿ ಎನ್ನಬಹುದು.

### ೩.೨.೧ ಸಾಹಿತ್ಯಕ ಪ್ರೇರಣೆಗಳು

ಪ್ರಾಚೀನ ಕಾವ್ಯಗಳಿಂದ ಹಿಡಿದು ಇಂದಿನವರೆವಿಗೂ ಕನ್ನಡದ ಸಂವೇದನೆ ತನ್ನದೇ ಆದ ರೀತಿಯಲ್ಲಿ ಪ್ರತಿಭಟನೆ, ಪ್ರತಿರೋಧಗಳನ್ನು ಅಭಿವ್ಯಕ್ತಿಸುತ್ತ ಬಂದಿದೆ. ಹೀಗೆ ಎದುರುಗೊಂಡ ಪ್ರಕ್ರಿಯೆಗಳನ್ನು ಐದು ಅಂಶಗಳಲ್ಲಿ ಗುರುತಿಸಲು ಸಾಧ್ಯ. ಅವು-

೧) ನಾಡು-ನುಡಿಗಳ ಬಗ್ಗೆ ಅಭಿಮಾನವನ್ನು ಮೂಡಿಸುವ ಪ್ರಜ್ಞೆಯನ್ನು ಅಭಿವ್ಯಕ್ತಗೊಳಿಸುವುದು.

೨) ಸಂಸ್ಕೃತ ಭೂಯಿಷ್ಠತೆಯನ್ನು ಪ್ರಶ್ನಿಸುವ ಹಾಗೂ ಅದರ ಪ್ರಾಧಾನ್ಯತೆಯನ್ನು ಒಡೆದು ಕನ್ನಡದಲ್ಲಿಯೇ ಬದಲಿ ವ್ಯವಸ್ಥೆಗಳನ್ನು ಕಂಡುಕೊಳ್ಳುವುದು.

೩) ಕನ್ನಡಿಗರ ಜೀವನ ವಿಧಾನ, ಸ್ವಾಭಿಮಾನ, ಕೆಚ್ಚು, ವೀರತ್ವ, ಶಾಂತಿ, ಸಹನೆ ಮೊದಲಾದ ಮೌಲ್ಯಗಳನ್ನು ಪ್ರತಿಪಾದಿಸುವುದು.

೪) ನಾಡಿನ ಭೌಗೋಳಿಕ ಸ್ವರೂಪವನ್ನು ಹಾಗೂ ಸಾಂಸ್ಕೃತಿಕ ಹಿರಿಮೆಗಳನ್ನು ಮೆರೆಯುವುದು.

೫) ಆಂಗ್ಲ ಭಾಷೆ ಹಾಗೂ ಇನ್ನಿತರೆ ಕನ್ನಡೇತರ ಭಾಷೆಗಳಿಗೆ ಪ್ರತಿರೋಧಗಳನ್ನು ಒಡ್ಡಿ ಕನ್ನಡದ ಅನನ್ಯತೆಯನ್ನು ಮೂಡಿಸುವುದು.

ಈ ಹಿನ್ನೆಲೆಯಲ್ಲಿ ಆದಿಕವಿ ಪಂಪನಿಂದ ಹಿಡಿದು ನಯಸೇನ, ಆಂಡಯ್ಯ, ಹರಿಹರ, ವಿದ್ಯಾರಣ್ಯ, ಬಿ.ಎಂ.ಶ್ರೀ. ಬೇಂದ್ರೆ, ಕುವೆಂಪು, ಅ.ನ.ಕೃ, ತ.ರಾ.ಸು, ಮ. ರಾಮಮೂರ್ತಿಗಳವರೆವಿಗೂ ಒಂದು ದೊಡ್ಡ ಪಟ್ಟಿಯನ್ನೇ ಹೆಸರಿಸಬಹುದು. ಅಂತೆಯೇ ಕೃತಿಗಳನ್ನು

ಹೆಸರಿಸುತ್ತಾ ಹೋದಲ್ಲಿ ಪಂಪಭಾರತ, ಕವಿರಾಜಮಾರ್ಗ, ಗದಾಯುದ್ಧ, ಧರ್ಮಾಮೃತ, ಗಿರಿಜಾಕಲ್ಯಾಣ, ಚಿಕ್ಕದೇವರಾಜ ವಿಜಯ, ಲೀಲಾವತಿ, ರಾಜಾವಳಿ ಕಥಾಸಾರ, ಕಬ್ಬಿಗರ ಕಾವ, ಶ್ರೀ ವಿದ್ಯಾರಣ್ಯ ಚರಿತೆ, ಕನ್ನಡ ಬಾವುಟ ಮೊದಲಾದವುಗಳನ್ನು ಪರಿಗಣಿಸಲೇ ಬೇಕಾಗುತ್ತದೆ.[೧] ಕನ್ನಡದ ಮೊದಲ ಕಾವ್ಯತತ್ವ ಗ್ರಂಥವಾದ ಕವಿರಾಜ ಮಾರ್ಗದಲ್ಲಿಯಂತು ನಾಡು-ನುಡಿ ಬಗೆಗೆ ಅಭಿಮಾನ ಮೂಡಿಸುವ ಅನೇಕ ಸಂಗತಿಗಳನ್ನು ಕಾಣಬಹುದು. ಅಲ್ಲದೆ ಇತರೆ ಶಾಸ್ತ್ರ ಗ್ರಂಥಗಳು, ಶಾಸನಗಳು, ಕಥೆ-ಕಾದಂಬರಿ-ನಾಟಕಗಳು, ಪ್ರಬಂಧಗಳು, ಲೇಖನ-ಭಾಷಣಗಳು ಮೊದಲಾದುವು ಸಾಹಿತ್ಯಕವಾಗಿ ಅಂದರೆ ಚಳವಳಿಗೆ ಬೇಕಾದ ಸೈದ್ಧಾಂತಿಕತೆಯನ್ನು ಸಂರಚಿಸಲು (Construct) ಪರಿಕರಗಳನ್ನು, ದಾಖಲೆಗಳನ್ನು ಒದಗಿಸಿವೆ.

### ೩.೨.೨ ವಚನಕಾರರ ಮೊಟ್ಟಮೊದಲ ಕನ್ನಡ ಚಳವಳಿ

ಕನ್ನಡ ಭಾಷೆ ಮತ್ತು ಕನ್ನಡಿಗರು ಸಂಸ್ಕೃತ ಭಾಷೆಯ ಸೆಳೆತಕ್ಕೆ ಸಿಲುಕಿ ನರಳುತ್ತಿದ್ದ ಕಾಲಘಟ್ಟ ಒಂದಿತ್ತು. ಈ ಅವಲಂಭನೆಯನ್ನು, ಭಾಷಿಕ ಹುನ್ನಾರಗಳನ್ನು ಮೊಟ್ಟಮೊದಲಿಗೆ ಛಿದ್ರಗೊಳಿಸಿದವರು ವಚನಕಾರರು. ನಮ್ಮ ಮನೋಚಿಂತನೆಗಳನ್ನು ಸಂಸ್ಕೃತದಿಂದ ಬಿಡುಗಡೆಗೊಳಿಸಿ ಅಚ್ಚಕನ್ನಡದಲ್ಲಿ ಸರಳವಾಗಿ ಮನಮುಟ್ಟುವಂತೆ ಮಾಡಿದ್ದು ೧೨ನೆಯ ಶತಮಾನದ ವಚನಗಳೇ ಆಗಿವೆ. ಬಸವಣ್ಣ, ಅಲ್ಲಮ ಪ್ರಭು, ಅಕ್ಕ ಮಹಾದೇವಿಯರಾದಿ ಯಾಗಿ ಸಮಾಜದ ವಿಭಿನ್ನ ವರ್ಗಗಳ ವಚನಕಾರರು ಕನ್ನಡದಲ್ಲಿಯೇ ಚಿಂತನೆ ನಡೆಸಿ ಮಾತನಾಡಿದವರು. ತಮ್ಮ ಸಹಜ-ಸರಳವಾದ ಕನ್ನಡ ಭಾಷಿಕ ಮಾಧ್ಯಮದ ಮೂಲಕ ಎಲ್ಲ ಜನರನ್ನು ತಲುಪಿದ ವಚನ ಚಳವಳಿ ಒಂದು ರೀತಿಯಲ್ಲಿ ಮೊಟ್ಟ ಮೊದಲ 'ಕನ್ನಡ ಚಳವಳಿ' ಎಂದರೆ ತಪ್ಪಾಗಲಾರದು. ಹೀಗಾಗಿ ಭಾಷಿಕ ಚಳವಳಿಯ ಮೊದಲ ಹರಿಕಾರರು ವಚನಕಾರರೇ ಆಗಿದ್ದಾರೆ. ಇವರ ಚಿಂತನೆಗಳು ಕನ್ನಡ-ಕನ್ನಡಿಗ-ಕರ್ನಾಟಕದ ಸಂವೇದನೆಯೇ ಆಗಿತ್ತು ಎಂಬುದು ಇಂದಿಗೂ ಮನವರಿಕೆ ಆಗುತ್ತದೆ.

### ೩.೨.೩ ಆಂಗ್ಲ ವಸಾಹತುಶಾಹಿ ಸನ್ನಿವೇಶದಲ್ಲಿ ಕನ್ನಡ

ವಚನಗಳ ಸಂವೇದನಶೀಲ ಕನ್ನಡ ಚಳವಳಿಯು ಹೆಚ್ಚಿನ ಅವಧಿಗೆ ಮುಂದುವರೆಯಲು ಸಾಧ್ಯ ಆಗಲೇ ಇಲ್ಲ. ಇದಕ್ಕೆ ಮುಖ್ಯವಾದ ತೊಡಕು ಉಂಟು ಮಾಡಿದ್ದು ಬ್ರಿಟಿಷರ ಆಗಮನ ಮತ್ತು ಅದರ ವಸಾಹತುಶಾಹಿ ಧೋರಣೆಗಳು. ಇದರ ಜೊತೆಗೆ ಪಾಶ್ಚಾತ್ಯ ಚಿಂತನೆಗಳ ಉತ್ಕಟವಾದ ಪ್ರಭಾವ. ಆಂಗ್ಲಭಾಷೆಯು ನಮ್ಮ ಮನೋಚಿಂತನೆಗಳಲ್ಲಿ ಹುದುಗಿಕೊಂಡು ಕನ್ನಡದ ಸ್ಥಾನವನ್ನು ಮರೆಮಾಚಿಸಿತು. ಈ ಘಟ್ಟದಲ್ಲಿಯೇ ಕನ್ನಡಕ್ಕೆ 'ವರ್ನಾಕ್ಯೂಲರ್' ಭಾಷೆಯ ಹಣೆಪಟ್ಟಿಯನ್ನು ಕಟ್ಟಿದ್ದು. ಅಂದರೆ ಕನ್ನಡ ಭಾಷೆ 'ಕ್ಯಾನರೀಸ್' ಭಾಷೆ ಆದದ್ದು. ಇದರಿಂದ ಸಂಸ್ಕೃತದಿಂದ ಮುಕ್ತವಾಗಿದ್ದ ಕನ್ನಡ ಭಾಷೆ ಎರಡನೆಯ ಬಾರಿಗೆ ಇಂಗ್ಲಿಷ್ ವಸಾಹತುಶಾಹಿಗಳ ಬಿಗಿಮುಷ್ಟಿಗೆ ಸಿಲುಕಿತು. ಈ ಮಾತನ್ನು ಅವರ ಕನ್ನಡ ಪರವಾದ ಸಾಹಿತ್ಯ ಸಂಶೋಧನೆಗಳ ಅಭಿವೃದ್ಧಿ ಕೆಲಸಗಳನ್ನು ಗಮನದಲ್ಲಿ ಇಟ್ಟುಕೊಂಡೆ ಹೇಳಲಾಗಿದೆ. ಆಂಗ್ಲಭಾಷೆಯ ಜೊತೆಗೆ ಮರಾಠಿ, ತೆಲುಗು, ತಮಿಳು, ಮಲೆಯಾಳ ಮೊದಲಾದ ಭಿನ್ನ ಭಾಷಿಕರ ಭಾಷಿಕ ಒತ್ತಡಗಳು ಸಹ ಕನ್ನಡಿಗರನ್ನು ಏಕೀಕರಣಕ್ಕೆ

ಮೊದಲೇ ಆವರಿಸಿದ್ದವು. ಕನ್ನಡಿಗರು ತಮ್ಮ ಗತದ ಬಗೆಗೆ ಶೂನ್ಯರಾದ ಚಾರಿತ್ರಿಕ ಘಟ್ಟ ಇದಾಗಿತ್ತು. ಒಂದು ರೀತಿಯಲ್ಲಿ ಎಲ್ಲ ಸಾಂಸ್ಕೃತಿಕ ಕೊಂಡಿಗಳು ಕಳಚಿಕೊಂಡು ವಿಸ್ಮೃತಿಗೆ ಒಳಗಾದ ಸನ್ನಿವೇಶ. ಈ ಸನ್ನಿವೇಶವನ್ನು ಹೋಗಲಾಡಿಸಲು ನಮ್ಮಲ್ಲಿ ಅನೇಕ ಪ್ರಯತ್ನಗಳು ನಡೆದವು.

## ೩.೨.೪ ವಿಭಜಿತ ಪ್ರದೇಶಗಳಲ್ಲಿನ ಕನ್ನಡ-ಕರ್ನಾಟಕತ್ವದ ಚಿಂತನೆ

ವಿಭಜಿತ ಕನ್ನಡ ಪ್ರದೇಶಗಳಲ್ಲಿನ ಕನ್ನಡದ ಹಿತ ಚಿಂತಕರು ತಮ್ಮ ತಮ್ಮ ಪರಿಧಿಗಳಲ್ಲಿಯೆ ಕನ್ನಡ ಕಳಕಳಿಯನ್ನು ಅಭಿವ್ಯಕ್ತಿಸಿದ್ದರು. ಈ ಕಳಕಳಿ ಕನ್ನಡ ಪ್ರದೇಶಗಳನ್ನು, ಕನ್ನಡಿಗರು ರಾಜಕೀಯವಾಗಿ ಒಂದು ಗೂಡಿಸುವುದೇ ಆಗಿತ್ತು. ಸ್ಥಳೀಯವಾಗಿ ಪರಕೀಯರೆನ್ನಿಸಿಕೊಂಡಿದ್ದ ಕನ್ನಡಿಗರ ಅಂದಿನ ಸನ್ನಿವೇಶ ಅನೇಕ ಸವಾಲುಗಳನ್ನು ಎದುರಿಸಿದ್ದು ಗಮನಾರ್ಹ. ಕನ್ನಡೇತರರ ಭಾಷಿಕ ಒತ್ತಡಗಳನ್ನು ಹತ್ತಿಕ್ಕಲು 'ಕನ್ನಡ- ಕರ್ನಾಟಕತ್ವ'ವನ್ನು ಮೂಡಿಸುವುದು ಅನಿವಾರ್ಯ ಆಯಿತು.[೨] ಈ ದಿಕ್ಕಿನಲ್ಲಿ ಹಲವು ಕನ್ನಡ ಸಾಹಿತ್ಯಕ ಸಂಘ-ಸಂಸ್ಥೆಗಳು ಚಾಲ್ತಿಗೆ ಬಂದಿದ್ದವು. ಅವುಗಳಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘ (೧೮೯೦ರಿಂದಲೂ) ಹಾಗೂ ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತು (೧೯೧೫ರಿಂದಲೂ) ಪ್ರಧಾನವಾದಂಥವು. ಇವುಗಳಿಗೆ ಪೂರಕವಾಗಿ ಅನೇಕ ಸಂಘ- ಸಂಸ್ಥೆಗಳು ಏಕೀಕರಣದ ಆಶಯಕ್ಕೆ ಹಾಗೂ ಆನಂತರದ ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸಿದ್ದು ಉಲ್ಲೇಖಾರ್ಹ. ಇವುಗಳ ನಾಡು-ನುಡಿ ಅರಿವು ಮೂಡಿಸುವ ಚಟುವಟಿಕೆಗಳು ಮುಂದಿನ ಕನ್ನಡ ಚಳವಳಿಗಳಿಗೆ ತಾತ್ವಿಕ ಭೂಮಿಕೆಯನ್ನು ನಿರ್ಮಾಣ ಮಾಡಿದವು. ಈ ನಿಟ್ಟಿನಲ್ಲಿ ಶಾಂತಕವಿ, ಹುಯಿಲಗೋಳ ನಾರಾಯಣರಾವ್, ಶಂ.ಬಾ. ಜೋಶಿ, ಆಲೂರ ವೆಂಕಟರಾವ್, ಬಿ. ಎಂ. ಶ್ರೀ, ಬೇಂದ್ರೆ, ಕುವೆಂಪು ಮೊದಲಾದವರು ಪ್ರಮುಖರು. ಇವರ ಸಾಹಿತ್ಯ ಸೃಷ್ಟಿ, ಚಟುವಟಿಕೆಗಳ ಜೊತೆಗೆ ಅಂದಿನ ಕಲಾವಿದರು, ಗಮಕಿಗಳು, ಸಂಗೀತಗಾರರು, ಪಿ. ಕಾಳಿಂಗ ರಾಯರಂಥ ಗಾಯಕರು-ಹೀಗೆ ಮೊದಲಾದವರು ತಮ್ಮ ಮಾಧ್ಯಮಗಳ ಮುಖೇನ ಶ್ರಮಿಸಿದ್ದು ಉಂಟು. ಇವರೆಲ್ಲರ ಪ್ರಯತ್ನಗಳಿಂದಾಗಿ ಕನ್ನಡಿಗರಲ್ಲಿ ಆವರಿಸಿದ್ದ 'ಸಾಂಸ್ಕೃತಿಕ ವಿಸ್ಮೃತಿ'ಯ ಪರದೆ ಸರಿಯಿತು.

ಕನ್ನಡಿಗರಲ್ಲಿ ಮೊಟ್ಟ ಮೊದಲಿಗೆ ಕನ್ನಡ ಅಧಿದೇವಿ, ತಾಯಿ 'ಭುವನೇಶ್ವರಿ'ಯ ಪರಿಕಲ್ಪನೆ, ಮೂರ್ತಿಗಳನ್ನು ಮೂಡಿಸಿದವರು ಶಾಂತಕವಿಗಳು. ತಮ್ಮ 'ಶ್ರೀ ವಿದ್ಯಾರಣ್ಯ ವಿಜಯ'ದ ಮೂಲಕ ಜಾಗೃತಿಯನ್ನುಂಟು ಮಾಡಿದರು. ಮರಾಠಿಗರ ಭರಾಟೆ, ಆಕ್ರಮಣಕಾರಿ ಪ್ರವೃತ್ತಿಗಳನ್ನು ಹತ್ತಿಕ್ಕಲು ತಾತ್ವಿಕವಾಗಿ ನೆರವಾದವರು ಶಾಂತಕವಿಗಳೇ. ಉತ್ತರ ಕರ್ನಾಟಕದಲ್ಲಿ ಶಾಂತಕವಿಗಳಂತೆ ಹಳೆಯ ಮೈಸೂರಿನಲ್ಲಿ 'ಕನ್ನಡ ನವೋದಯ'ದ ಪ್ರವರ್ತನೆ ಮಾಡಿದವರು ಬಿ. ಎಂ. ಶ್ರೀಕಂಠಯ್ಯ. 'ಶ್ರೀ' ಅವರು ಮೊಟ್ಟ ಮೊದಲ ಬಾರಿಗೆ ಈ ಕಡೆಯ ಕನ್ನಡಿಗರನ್ನು ತಮ್ಮ 'ಕನ್ನಡ ಬಾವುಟ' ಸಂಕಲನದ ಮುಖೇನ ತಾತ್ವಿಕ ಬೆಂಬಲ, ಜಾಗೃತಿ ಮೂಡಿಸಿದ್ದು ಗಮನಾರ್ಹ. 'ಶ್ರೀ' ಅವರು ಕನ್ನಡದ ಸಂಕೇತ ಅಥವಾ ಪ್ರತೀಕಗಳನ್ನಾಗಿ 'ಕನ್ನಡ ಬಾವುಟ' (ಇಂದಿನ ಹಳದಿ ಕೆಂಪು ಬಾವುಟ ಅಲ್ಲ, ಬದಲಾಗಿ ಕವನ ಸಂಕಲನದ ಹೆಸರು. ಅಂದು 'ಕನ್ನಡ ಬಾವುಟ' ನಿರ್ದಿಷ್ಟ ರೂಪ ಪಡೆದಿರಲಿಲ್ಲವಾದ್ದರಿಂದ 'ಭುವನೇಶ್ವರಿ'ಯ ಚಿತ್ರದ ಬಾವುಟಗಳನ್ನೇ ಬಳಸುತ್ತಿದ್ದರು ಎನ್ನಲಾಗಿದೆ), ಕನ್ನಡ ರತ್ನ ಸಿಂಹಾಸನ, ಕನ್ನಡ ತಾಯಿ,

ಕನ್ನಡ ಕುಲ, ಕನ್ನಡದರಸಿ, ಕನ್ನಡ ಭುವನೇಶ್ವರಿ ಮೊದಲಾದವುಗಳನ್ನು ಕನ್ನಡಿಗರು ಮನಸ್ಸಿನಲ್ಲಿ ಸ್ಥಾಪಿಸಿದರು. ಶಾಂತಕವಿ, ಬಿ.ಎಂ. ಶ್ರೀಗಳಂತೆಯೇ ನವೋದಯ ಕವಿಗಳಲ್ಲಿ ಬೇಂದ್ರೆ, ಕುವೆಂಪು ಮೊದಲಾದವರು ಸಹ ಚಳವಳಿಗಳಿಗೆ, ಚಳವಳಿಗಾರರಿಗೆ ತಾತ್ವಿಕ ನೆಲೆಗಟ್ಟನ್ನು ನಿರ್ಮಿಸಿ ಕೊಟ್ಟಿದ್ದರು ಎಂದರೆ ತಪ್ಪಲ್ಲ. ಆಲೂರ ವೆಂಕಟರಾಯರಂತೂ ತಮ್ಮ 'ಕರ್ನಾಟಕ ಗತವೈಭವ'ದ ಮುಖೇನವಷ್ಟೇ ಅಲ್ಲದೆ ನಾಡಿನ ಎಲ್ಲೆಡೆ ಕನ್ನಡಿಗರ ಸ್ವಾಭಿಮಾನ, ಕನ್ನಡ-ಕರ್ನಾಟಕತ್ವವನ್ನು ಹೆಚ್ಚಿಸಲು ಕಾರಣರಾದರು. ಇವರೆಲ್ಲರ ಪ್ರಯತ್ನಗಳು ಕರ್ನಾಟಕದ ಏಕೀಕರಣಕ್ಕಷ್ಟೆ ಅಲ್ಲದಿದ್ದರೂ ಮುಂದಿನ ಕನ್ನಡಿಗರ ಸಂಘಟನಾತ್ಮಕ ಚಳವಳಿಗಳಿಗೆ ಪ್ರೇರಣೆಗಳಾದವು.

### ೩.೨.೪ ಸ್ವಾತಂತ್ರ್ಯ ಮತ್ತು ಏಕೀಕರಣೋತ್ತರ ಕನ್ನಡದ ಚಿಂತನೆ

ಸಾಹಿತ್ಯಕ ವಲಯದಲ್ಲಿ ಇಂಡಿಯಾದ ಸ್ವಾತಂತ್ರ್ಯದ ನಂತರ ನವೋದಯದ ಆಶಯಗಳನ್ನೇ ಪ್ರಶ್ನಿಸುವಂತೆ ಆಯಿತು. ಅಂತೆಯೆ ೧೯೫೬ರ ಕರ್ನಾಟಕದ ಏಕೀಕರಣದ ಆನಂತರ ಇದರ ಆಗು-ಹೋಗುಗಳ ಬಗ್ಗೆಯೂ ಪ್ರಶ್ನೆಗಳು ಉದ್ಭವಿಸದೆ ಇರಲಿಲ್ಲ. ಅಂದರೆ ಕನ್ನಡದ ಸಂದರ್ಭದಲ್ಲಿ ದೇಶಾಭಿಮಾನ, ಪ್ರಾಂತ್ಯಾಭಿಮಾನ, ಭಾಷಾಭಿಮಾನದ ಮೌಲ್ಯಗಳು ಪ್ರಗತಿಶೀಲರ ಹೊಸ ಚಿಂತನೆ, ಚಟುವಟಿಕೆಗಳಿಗೆ ಕಾರಣ ಆದವು. ಜನರ ಜೀವನ ದೃಷ್ಟಿ ಸಮಾಜದಲ್ಲಿನ ಸಮಾನತೆಗಳ ಕಡೆಗೆ ಗಮನ ಹರಿದು ಹುಳುಕುಗಳನ್ನು ಎತ್ತಿ ಹಿಡಿವ ಪರಿಕರಗಳು ಸೃಷ್ಟಿ ಆದವು. ಏಕೀಕರಣದಿಂದಾದ ಕನ್ನಡ-ಕರ್ನಾಟಕದ ಸ್ಥಿತಗತಿಗಳ ಬಗ್ಗೆ, ಕನ್ನಡಿಗರ ಮೌಲ್ಯ, ಆದರ್ಶಗಳ ಬಗ್ಗೆ ಚಿಕಿತ್ಸಕ ನೋಟ ಹುಟ್ಟಿಕೊಂಡಿತು. ಸಾಹಿತ್ಯಕವಾದ ಈ ಬದಲಾವಣೆಗಳು ಇಂಡಿಯಾದ ಸಫಲತೆ, ವಿಫಲತೆಗಳಂತೆಯೇ ನಾಡಿನ ಅಭಿವೃದ್ಧಿಯ ಕಡೆಗೂ ಗಮನ ಸೆಳೆದವು. ಇಂಥ ಪ್ರಗತಿಪರವಾದ ನೋಟಗಳಿಗೆ ರಾಜಕೀಯ ವಲಯದಲ್ಲಿನ ಮಾರ್ಕ್ಸಿಸ್ಟ್, ಸೋಷಿಯಲಿಸ್ಟ್ ಚಿಂತನಾ ನೆಲೆಗಳೂ ಕಾರಣ. ರಾಜಕಾರಣದಲ್ಲಾದ ಅವಸ್ಥಾಂತರಗಳಿಂದಾಗಿ ಸಾಹಿತ್ಯಕ ವಲಯದಲ್ಲಿ ಗಮನಾರ್ಹ ಬದಲಾವಣೆಗಳು ಕಾಣಿಸಿಕೊಂಡವು. ಇದರ ಪರಿಣಾಮವಾಗಿಯೇ ನಾಡು-ನುಡಿ ಪ್ರಜ್ಞೆಗಳು ಏಕೀಕರಣದ ನಂತರ ಭಿನ್ನ ನೆಲೆಗಳಲ್ಲಿ ಚುರುಕುಗೊಂಡದ್ದು.

ಏಕೀಕರಣವು ಭಾಷಿಕ, ರಾಜಕೀಯ, ಭೌಗೋಳಿಕವಾದ ಆಶಯಗಳನ್ನು ಈಡೇರಿಸಿದ್ದರೂ ಪ್ರಾದೇಶಿಕವಾಗಿ ಕನ್ನಡಿಗರಲ್ಲಿ ಅಸಮಾನತೆ, ಅಸಮಧಾನಗಳನ್ನು ಹಾಗೆಯೇ ಉಳಿಸಿದೆ ಎಂಬುದನ್ನು ಅನಾವರಣಗೊಳಿಸಿತು. ಹೀಗಾಗಿ ಕನ್ನಡಿಗರ ಭಾವನಾತ್ಮಕ ಏಕೀಕರಣದ ಅವಶ್ಯಕತೆ ಹಾಗೂ ಸಾಂಸ್ಕೃತಿಕವಾದ ಆತ್ಮೀಕ್ರಿತೆಗಳ ಜರೂರು ಕಾಣಿಸಿಕೊಂಡವು. ಜಾತಿ, ಪ್ರಾತಿನಿಧ್ಯ, ಸ್ವಾರ್ಥ, ರಾಜಕಾರಣದ ಲಾಭಗಳು ಕನ್ನಡಿಗರಲ್ಲಿ ಒಡಕು ಧ್ವನಿಗಳಿಗೆ ನಾಂದಿ ಹಾಡಲಾರಂಭಿಸಿದ್ದು ಈ ಘಟ್ಟದಿಂದಲೆ. ಇಂಥ ಸಂಕೀರ್ಣ ಸನ್ನಿವೇಶದಲ್ಲಿ ಕನ್ನಡ-ಕರ್ನಾಟಕ ಪರವಾದ ಸಾಹಿತ್ಯಕ ಚಿಂತನೆಗಳು ಹುಟ್ಟಿಕೊಳ್ಳಲು ಆರಂಭಿಸಿದವು. ಈ ಪ್ರಗತಿಪರತೆಗೆ ಸಮತಾ-ಸಮಾಜವಾದಿ ರಾಜಕೀಯ ಧುರೀಣರ ಮನೋಬೆಂಬಲಗಳು ಸಹ ಕಾರಣ. ಇವೆಲ್ಲದರ ಪ್ರಭಾವ ಪರಿಣಾಮಗಳ ಫಲಿತಾಂಶವೇ ಪ್ರಗತಿಶೀಲ ಸಾಹಿತ್ಯಪಂಥದ ಚಿಂತನೆಗಳ ಅನುಷ್ಠಾನ. ಈ ನಿಟ್ಟಿನಲ್ಲಿ ಅಂದು ಅ.ನ.ಕೃಷ್ಣರಾವ್, ಬಸವರಾಜ ಕಟ್ಟೀಮನಿ, ಚದುರಂಗ, ತ.ರಾ.ಸು, ನಿರಂಜನ ಮೊದಲಾದವರನ್ನು

ಗುರುತಿಸಬಹುದು. ಏಕೀಕರಣಕ್ಕೆ ಮೊದಲು ನವ್ಯೋದಯರ ಪೈಕಿ ಕೆಲಸ ಮಾಡಿದ 'ಗೆಳೆಯರ ಗುಂಪಿ'ನ (ಧಾರವಾಡದ ಕಡೆಗೆ) ಸೃಷ್ಟಿ ಆಗಿತ್ತು. 'ತುಂಟರ ಗುಂಪಿ'ನಲ್ಲಿದ್ದವರು ಬಹುಪಾಲು ಕಾದಂಬರಿಕಾರರೇ.[3] ಇವರ ಚಟುವಟಿಕೆಗಳು ಏಕೀಕರಣದ ನಂತರ ಹೆಚ್ಚು ಕ್ರಿಯಾಶೀಲವಾದವು. ಕನ್ನಡ ಚಳವಳಿ ಜನಪರ ಆಗಲು ಈ ಪಂಥದವರು ಹಾಕಿಕೊಟ್ಟ ಸಾಹಿತ್ಯಕ ಹಿನ್ನೆಲೆ-ತಳಹದಿಗಳೇ ಕಾರಣ. ಸಮಾಜ ಮತ್ತು ವಾಸ್ತವತೆಗಳ ಅಭಿವ್ಯಕ್ತಿ ಇವರ ಆಶಯವಾಗಿತ್ತು. ಈ ಆಶಯಗಳು ಸಮಾಜವಾದಿ ಧುರೀಣ ರಾಮಮನೋಹರ ಲೋಹಿಯಾ ಹಾಗೂ ಅವರಿಂದ ಪ್ರಭಾವಿತರಾಗಿದ್ದ ಶಾಂತವೇರಿ ಗೋಪಾಲಗೌಡರ ಚಿಂತನೆ-ಚಟುವಟಿಕೆಗಳಿಂದ ಬಂದಂಥವು. ಇವರೊಂದಿಗೆ ಕೋಣಂದೂರು ಲಿಂಗಪ್ಪ, ಕಡಿದಾಳ್ ಶಾಮಣ್ಣ, ತೇಜಸ್ವಿ, ಯು. ಆರ್. ಅನಂತಮೂರ್ತಿ, ಜೆ. ಎಚ್. ಪಟೇಲ್ ಮೊದಲಾದವರು ಸಹ ಇದ್ದರು. ಪ್ರಗತಿಶೀಲರಿಗೆ ಇಂಥ ಸಮಾಜವಾದಿ ಪಕ್ಷದವರೊಂದಿಗೂ ಒಡನಾಟ- ಸಂಬಂಧಗಳು ಇದ್ದವು. ಕನ್ನಡ ಚಳವಳಿಗೆ ಈ ಥರದ ಹಿನ್ನೆಲೆ ಕೆಲಸ ಮಾಡಿತ್ತು. ಆದ್ದರಿಂದಲೆ ಕೋಣಂದೂರು ಲಿಂಗಪ್ಪನಂಥವರು ಅ.ನ.ಕೃ ಮೊದಲಾದ ಪ್ರಗತಿಶೀಲರರೊಂದಿಗೆ ಬೆರೆಯುವಂತೆ ಆದದ್ದು. ಅಲ್ಲದೆ ಕನ್ನಡ ಚಳವಳಿ ಸಾರ್ವಜನಿಕ ಸ್ವರೂಪವನ್ನು ಪಡೆಯುವಂತೆ ಆಯಿತು.

### ೩.೨.೬ ಚಳವಳಿಗೆ ಕಾರಣವಾದ ಸ್ಥಾನಿಕ ಒತ್ತಡಗಳು

ನಾಡಿನ ಏಕೀಕರಣದಿಂದ 'ಕರ್ನಾಟಕ ಯುವಜನ ಸಭಾ' ಅಸ್ತಿತ್ವಕ್ಕೆ ಬರುವವರೆಗೂ (೧೯೫೬-೧೯೬೨) 'ಕನ್ನಡ ಚಳವಳಿ' ಎಂಬುದು ಸಮಗ್ರವಾಗಿ ಸಂಘಟಿತ ರೂಪಕ್ಕೆ ಬಂದಿರಲಿಲ್ಲ. ಅಂದರೆ ಈ ಆರು ವರುಷಗಳ ಅವಧಿಯಲ್ಲಿ ನಾಡಿನಾದ್ಯಂತ ಅನೇಕ ಸ್ಥಿತ್ಯಂತರಗಳು ಆದವು. ಈ ಬದಲಾವಣೆಗಳು ಕನ್ನಡಿಗರನ್ನು ಸಾರ್ವಜನಿಕವಾಗಿ ಚಳವಳಿ ಹೂಡಲು ಬೇಕಾದ ವೇದಿಕೆಯನ್ನು ನಿರ್ಮಾಣ ಮಾಡಲು ಸಹಕರಿಸಿವೆ. ಆದ್ದರಿಂದಲೇ ಈ ಅವಧಿ ಒಂದು ನಿಟ್ಟಿನಲ್ಲಿ ಸಂಕೀರ್ಣವಾದ ಕಾಲಘಟ್ಟ. ಏಕೆಂದರೆ ರಾಜಕಾರಣಗಳ ವೈಫಲ್ಯತೆಗಳು ಹಾಗೂ ಜನಸಾಮಾನ್ಯರ ಅಸಮಧಾನ, ಅತೃಪ್ತಿಗಳು ಒಟ್ಟೊಟ್ಟಿಗೆ ಕಾಣಿಸಿಕೊಂಡಿದ್ದವು. ಜೊತೆಗೆ ಸಾರ್ವಜನಿಕವಾಗಿ ಕನ್ನಡಿಗರ ಬದುಕನ್ನು ಭ್ರಮನಿರಸನದ ಕಡೆಗೆ ದೂಡುವಂತೆ ಅಂದಿನ ಸರ್ಕಾರ ಮಾಡಿತ್ತು. ಕನ್ನಡಿಗರಿಗೆ ಆಗುತ್ತಿದ್ದ ಅವಮಾನ, ಆತಂಕಗಳಿಗೆ ಶೀಘ್ರವಾದ ಸ್ಪಂದನೆ, ಪರಿಹಾರಗಳು ಆಡಳಿತದ ಕಡೆಯಿಂದ ದೊರೆಯುತ್ತಿರಲಿಲ್ಲ. ರಾಜಧಾನಿ ಬೆಂಗಳೂರಿನಲ್ಲಿಯೇ ಕನ್ನಡಿಗರು ಅತಂತ್ರರೂ, ಅಲ್ಪಸಂಖ್ಯಾತರೂ ಆಗಿದ್ದ ಸನ್ನಿವೇಶ ಅದಾಗಿತ್ತು. ತಮಿಳು ಮತ್ತು ಇತರೆ ಕನ್ನಡೇತರರ ಆಕ್ರಮಣಕಾರಿ ಪ್ರವೃತ್ತಿಗಳಿಂದ ಬೆಂಗಳೂರಿಗರು ಮುಕ್ತರಾಗಿರಲಿಲ್ಲ. ಏಕೀಕರಣದಿಂದ ನಿರೀಕ್ಷಿತ ಆಶಯಗಳು ಈಡೇರದಿದ್ದುದು ನಾಡಿನಾದ್ಯಂತ ಪ್ರತಿಕ್ರಿಯಿಸುವಂತೆ ಮಾಡಿತ್ತು. ಈ ಸನ್ನಿವೇಶದಲ್ಲಿನ ಕನ್ನಡ-ಕರ್ನಾಟಕ ಪರವಾದ ಧ್ವನಿಗೆ ಸ್ಥಳೀಯ ಸಮಸ್ಯೆಗಳು, ಅವಮಾನಗಳೆ ಕಾರಣ. ಅಂದರೆ ನಾಡಿನಾದ್ಯಂತ ಆಯಾ ಸ್ಥಾನಿಕ ಸವಾಲುಗಳನ್ನು ಎದುರಿಸಲು ಕನ್ನಡಿಗರು ಸಂಘಟಿತರಾಗುವಂತೆ ಪರಿಸ್ಥಿತಿಗಳು ನಿರ್ಮಾಣಗೊಂಡಿದ್ದವು. ಇಂಥ ಪರಿಸ್ಥಿತಿ, ಪಲ್ಲಟಗಳು ಗ್ರಹಿಕೆಯು ಬೆಂಗಳೂರಿನ 'ಕನ್ನಡ ಚಳವಳಿ'ಯ ಹುಟ್ಟಿಗೆ ಹೇಗೆ ಕಾರಣವಾಯಿತು ಎಂಬುದನ್ನು ಹಿನ್ನೆಲೆಯಾಗಿ ಅರ್ಥೈಸಲು ಅನುವು ಮಾಡಿಕೊಡುತ್ತದೆ.

ರಾಜಧಾನಿ ಬೆಂಗಳೂರಿನ ಕನ್ನಡ ಪರಿಸರವನ್ನು ಗ್ರಹಿಕೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ನಾಡಿನ ಇತರೆ ಭಾಗಗಳಲ್ಲಿನ ಪರಿಸ್ಥಿತಿಗಳನ್ನು ಅರಿಯುವುದು ಮುಖ್ಯ. ಮೈಸೂರಿನ ಕೆಲವರನ್ನು ಬಿಟ್ಟು ಉಳಿದಂತೆ ಎಲ್ಲ ಕನ್ನಡಿಗರಿಗೂ 'ಕರ್ನಾಟಕ' ಎಂದು ನಾಮಕರಣ ಮಾಡದಿದ್ದುದು ಅಸಮಾಧಾನದ ಸಂಗತಿ ಆಗಿತ್ತು. ಇದರ ಜೊತೆಗೆ ತಮ್ಮ ವಾಸ ಸ್ಥಳಗಳಲ್ಲಿನ ಸ್ಥಾನಿಕ ಸಮಸ್ಯೆಗಳು, ತೊಡಕುಗಳು ಏಕೀಕರಣದಿಂದ ತೃಪ್ತಿಯನ್ನು ತಂದುಕೊಟ್ಟಿರಲಿಲ್ಲ.

### ೩.೨.೬.೧ ಮರಾಠಿಗರ ಆಕ್ರಮಣಕಾರಿ ಪ್ರವೃತ್ತಿಗಳು

ಏಕೀಕರಣದ ಅನಂತರ ಬೆಳಗಾವಿಯ ಕನ್ನಡಿಗರಿಗೆ ಮೊದಲಿನದಕ್ಕಿಂತಲೂ ಹೆಚ್ಚಿನ ಸಮಸ್ಯೆಗಳನ್ನು ಎದುರಿಸುವಂತೆ ಆಗಿತ್ತು. ೧೯೫೧ರ ಜನಗಣತಿ ಪ್ರಕಾರ ಬೆಳಗಾವಿಯಂಥ ಕನ್ನಡದ ನೆಲದಲ್ಲಿ ಕನ್ನಡಿಗರ ಸಂಖ್ಯೆ ಕೇವಲ ಶೇಕಡಾ ೨೪ ಮಾತ್ರ.[೪] ಬಹುಸಂಖ್ಯಾತ ಮರಾಠಿಗರು ತಮ್ಮ ಸಂಖ್ಯೆಯ ಆಧಾರದ ಮೇಲೆ ಮಹಾರಾಷ್ಟ್ರಕ್ಕೆ ಬೆಳಗಾವಿಯನ್ನು ಸೇರಿಸುವ ಹುನ್ನಾರಗಳನ್ನು ಚಾಲ್ತಿಯಲ್ಲಿಯೆ ಇಟ್ಟಿದ್ದರು. ಮರಾಠಿಗರ ಈ ವಾದ ಏಕೀಕರಣದ ನಂತರವೂ ಹೆಚ್ಚಿನ ಆಕ್ರಮಣಕಾರಿ ಪ್ರವೃತ್ತಿಗಳಿಗೆ ಎಡೆಮಾಡಿಕೊಟ್ಟಿತ್ತು. ಆಶ್ಚರ್ಯದ ಸಂಗತಿ ಅಂದರೆ ಈ ವಾದದಿಂದಲೆ ಅವರು ಗೋವೆಯನ್ನು ಸಹ ಮಹಾರಾಷ್ಟ್ರಕ್ಕೆ ಸೇರಿಸಬೇಕೆಂದು ಪಟ್ಟು ಹಿಡಿದದ್ದು. ಇಂಥ ಸನ್ನಿವೇಶದಲ್ಲಿ ಕನ್ನಡಿಗರ ಸರ್ಕಾರ ಈ ಭಾಗದಲ್ಲಿ ಕನ್ನಡ ಶಾಲೆಗಳಿಗೆ ಪ್ರೋತ್ಸಾಹ ನೀಡುವಲ್ಲಿ ಅಂಥ ಉತ್ಸಾಹವನ್ನೇನು ವ್ಯಕ್ತಪಡಿಸಿರಲಿಲ್ಲ. ನಮ್ಮ ಶಾಲೆಗಳಿಗೆ ಒಳ್ಳೆಯ ಕಟ್ಟಡಗಳಾಗಲಿ, ಅಧ್ಯಾಪಕರಾಗಲಿ ಇಲ್ಲದಿದ್ದುದ್ದು ಕನ್ನಡಿಗರೂ ಸಹ ಮರಾಠಿ ಶಾಲೆಗಳ ಕಡೆಗೆ ಗಮನಹರಿಸುವಂತೆ ಆಗಿತ್ತು. ಮರಾಠಿಮಯವಾಗಿದ್ದ ಅಲ್ಲಿನ ಸನ್ನಿವೇಶ ಮಹಾರಾಷ್ಟ್ರ ಸರ್ಕಾರದಿಂದ ಪ್ರೋತ್ಸಾಹವನ್ನು ಪಡೆದು ಶಾಲಾ ಕಟ್ಟಡಗಳನ್ನು ನಿರ್ಮಿಸಿದ ಮರಾಠಿ ಅಧ್ಯಾಪಕರಿಂದ ಮರಾಠಿ ಭಾಷೆಯನ್ನೇ ಕಲಿಯುವಂತೆ ಮಾಡಿತ್ತು. ಮರಾಠಿಗರ ಸಾಂಸ್ಕೃತಿಕ ವಿಸ್ತರಣೆಗಳಿಗಾಗಿ ಅವರ ಸರ್ಕಾರ ಉದಾರವಾಗಿ ಆರ್ಥಿಕ ಸಹಾಯವನ್ನು ನೀಡಲು ಮರೆತಿರಲಿಲ್ಲ. ಆದರೆ ಕನ್ನಡಿಗರಿಗೆ ವರ್ಷದಲ್ಲಿ ಒಂದು ಭಾರಿ 'ನಾಡಹಬ್ಬ' ವನ್ನು ಮಾಡುವುದೆ ದುಸ್ತರವಾಗಿತ್ತು. ಬೆಳಗಾವಿ ಜಿಲ್ಲೆಯಲ್ಲಿ ಮರಾಠಿ ಕಲಿತು, ಮಾತನಾಡುವ ಪರಿಪಾಠ ಏಕೀಕರಣದಿಂದ ಬದಲಾಗಲೇ ಇಲ್ಲ. ಅಲ್ಲದೆ ಜಿಲ್ಲೆಯ ಎಲ್ಲ ವ್ಯಾಪಾರ-ವಹಿವಾಟುಗಳು ಸಹ ಮರಾಠಿಮಯುವೇ ಆಗಿತ್ತು. ನಾಮಫಲಕಗಳು ಕನ್ನಡ ಮಯವಾಗಿರಲಿಲ್ಲ (ಈ ಹೊತ್ತಿಗೂ ಬಹಳಷ್ಟು ಕಡೆ ಹಾಗೆಯೇ ಇವೆ). ಬೆಳಗಾವಿಯ ಅಲ್ಯುಮಿನಿಯಂ ಕಾರ್ಖಾನೆ ಮೊದಲಾದೆಡೆಗಳಲ್ಲಿ ಪ್ರಜ್ಞಾಪೂರ್ವಕವಾಗಿ ಕನ್ನಡಿಗರನ್ನು ಕಡಿಮೆ ಸಂಖ್ಯೆಯಲ್ಲಿ ಇರುವಂತೆ ನೋಡಿಕೊಂಡರು. ಸ್ಥಳೀಯ ಸರ್ಕಾರಗಳ (ಕಾರ್ಪೊರೇಷನ್ ಇತ್ಯಾದಿ) ಆಳ್ವಿಕೆಯಲ್ಲೂ ಮರಾಠಿಗರ ಪುಂಡಾಟಿಕೆ, ದಬ್ಬಾಳಿಕೆಗಳು ಕಡಿಮೆ ಆಗುವ ಬದಲು ಹೆಚ್ಚಾದವು. ಏಕೀಕರಣದ ನಂತರವೂ 'ಮಹಾರಾಷ್ಟ್ರ ಏಕೀಕರಣ ಸಮಿತಿ' (MES) ಯವರದೇ ರಾಜಕಾರಣದಲ್ಲಿ ಮೇಲುಗೈಯಾಗಿ ಕನ್ನಡಿಗರನ್ನು ಹೆದರಿಸುವಂತೆ ಮಾಡಿತು. ಕನ್ನಡಿಗರ ಹಿತರಕ್ಷಣೆ, ಪ್ರಾತಿನಿಧ್ಯಗಳಿಗೆ ಸಂಬಂಧಿಸಿದಂತೆ ಕಂಡಿದ್ದ ಏಕೀಕರಣಪೂರ್ವದ ಕನಸುಗಳು ಹುಸಿ ಆದವು. ಆದ್ದರಿಂದಲೇ ಇಲ್ಲಿ ಕನ್ನಡ ಪರವಾದ ಸಂಘ-ಸಂಸ್ಥೆಗಳು ಹುಟ್ಟಿಕೊಂಡದ್ದು. ಅಂತೆಯೆ ಅನೇಕರು ಒಂದು ಸಂಘಟಿತ ರೂಪದಲ್ಲಿ ಅಲ್ಲದಿದ್ದರೂ ತಮ್ಮ ಮಿತಿಗಳಲ್ಲಿಯೇ ಮರಾಠಿಗರನ್ನು, ಅವರ ಸವಾಲುಗಳನ್ನು

ಎದುರಿಸುವ ಪ್ರತಿರೋಧಗಳನ್ನು ಒಡ್ಡುವುದು ಅನಿವಾರ್ಯ ಆಯಿತು. ಆದರೆ 'ಕನ್ನಡ ಚಳವಳಿ' ಎಂಬ ಹಣೆಪಟ್ಟಿ ಈ ಪ್ರತಿರೋಧಗಳಿಗೆ ಇಲ್ಲದಿರಬಹುದು.

### ೩.೨.೬.೨ ತೆಲುಗು ಮತ್ತು ತಮಿಳು ಭಾಷಿಕರ ಒತ್ತಡಗಳು

ಆಂಧ್ರ ಪ್ರದೇಶದ ತೆಲುಗರ ಪಾಲಿಗೆ ಕೆಲವು ಕನ್ನಡ ಪ್ರದೇಶಗಳು ಸೇರಿಕೊಂಡದ್ದು ಏಕೀಕರಣದ ನಂತರವೂ ಅನೇಕ ತೊಡಕುಗಳನ್ನು ಉಂಟುಮಾಡಿತ್ತು. ಕೋಲಾರ ಮತ್ತು ಬಳ್ಳಾರಿ ಜಿಲ್ಲೆಗಳಿಗೆ ಹೊಂದಿಕೊಂಡಂತೆ ಅನೇಕ ಪ್ರದೇಶಗಳು ತೆಲುಗರಿಗೆ ಸೇರಿ ಗಡಿಗಳಲ್ಲಿ ಕನ್ನಡಿಗರ ಮೇಲೆ ಒತ್ತಡಗಳನ್ನು ಹೇರುವುದು ಸಾಮಾನ್ಯವಾಯಿತು. ಕನ್ನಡ ಪ್ರದೇಶಗಳನ್ನು ಕಳೆದುಕೊಂಡ ಕನ್ನಡಿಗರು ಆಂಧ್ರ ಸರ್ಕಾರದ ಅಡಿಯಲ್ಲಿ 'ಕನ್ನಡಿಗರು' ಎಂಬ ತಾತ್ಸಾರಕ್ಕೆ ಒಳಗಾದರು. ಅಂದರೆ ಆಲೂರು, ಆದವಾನಿ (ಅಧೋನಿ), ರಾಯದುರ್ಗ, ಮಡಕಶಿರ, ಪಾವಗಡ, ಗೂಳ್ಯಂ, ಪೆದಹರಿವಾಣ, ಕೌತಾಳ್, ಬದನೆಹಾಳ್, ನದಿಚಾಗಿ ಮೊದಲಾದ ಗಡಿ ಪ್ರದೇಶಗಳಲ್ಲಿನ ಕನ್ನಡಿಗರು ಶಿಕ್ಷಣ, ಉದ್ಯೋಗ, ಅಭಿವೃದ್ಧಿಗಳಿಗೆ ಸಂಬಂಧಿಸಿದಂತೆ ತಾರತಮ್ಯಕ್ಕೆ ಒಳಗಾಗಿದ್ದು ಉಂಟು. ಈ ಪ್ರದೇಶಗಳು ಏಕೀಕರಣದ ನಂತರವೂ ಕನ್ನಡ ಶಾಲೆ ಮತ್ತು ಶಿಕ್ಷಕರ ವಿಚಾರಗಳಲ್ಲಿ ಪ್ರಗತಿ ಕಾಣಲಿಲ್ಲ. ಬಳ್ಳಾರಿಯು ೧೯೫೩ರಲ್ಲಿ ಹಳೆಯ ಮೈಸೂರು ಸಂಸ್ಥಾನಕ್ಕೆ ಸೇರಿತು. ಆದರೂ ಈ ಪ್ರದೇಶದಲ್ಲಿ ಅದರಲ್ಲೂ ಬಳ್ಳಾರಿ, ಹೊಸಪೇಟೆ ಮೊದಲಾದೆಡೆಗಳಲ್ಲಿ ಕನ್ನಡಿಗರ ಮೇಲಿನ ತೆಲುಗರ ಅತ್ಯಾಚಾರಗಳು ಕಡಿಮೆ ಆಗಲಿಲ್ಲ. ಸೋಷಿಯಲಿಸ್ಟರು ಅದರಲ್ಲೂ ಶಾಂತವೇರಿ ಗೋಪಾಲಗೌಡರು ಸದನದಲ್ಲಿ ಈ ಕುರಿತು ಪ್ರಸ್ತಾಪಿಸಿ ಕನ್ನಡಿಗರಿಗೆ ರಕ್ಷಣೆ ಒದಗಿಸಲು ಮೇಲಿಂದ ಮೇಲೆ ಒತ್ತಡ ತರಲಾರಂಭಿಸಿದ್ದರು.[೫] ಆದರೂ ಕನ್ನಡಿಗರ ಮೇಲಿನ ಹಿಂಸಾಚಾರಗಳು ಕಡಿಮೆ ಆಗಿರಲಿಲ್ಲ. ಏಕೀಕರಣದ ನಂತರವೂ ಕನ್ನಡಿಗರ ಆತಂಕಗಳು ಕಡಿಮೆ ಆಗದೇ ಇದ್ದುದು ಇಲ್ಲಿನ ಕನ್ನಡ ಪರವಾದ ಚಳವಳಿಗಳಿಗೆ ಪ್ರೇರಣೆ ನೀಡಿದ್ದವು.

ಕೋಲಾರ ಹಾಗೂ ಅದರ ಗಡಿ ಪ್ರದೇಶಗಳು ಆಂಧ್ರ ಮತ್ತು ತಮಿಳುನಾಡು ಪ್ರದೇಶಗಳಿಗೆ ಹೊಂದಿಕೊಂಡು ಇದ್ದುದು ಅನೇಕ ರೀತಿಯ ಭಾಷಿಕ ಒತ್ತಡಗಳಿಗೆ ಕಾರಣ ಆಯಿತು. ಈ ಭಾಗದಲ್ಲಿ ತೆಲುಗು ಹಾಗೂ ತಮಿಳು ಮಾತನಾಡುವವರು ಕನ್ನಡಿಗರ ಮೇಲೆ ಪ್ರಭಾವ ಬೀರಿದರು. ಅಂತರಿಕವಾಗಿ ಕೋಲಾರದ ಚಿನ್ನದಗಣಿ ಪ್ರದೇಶ (KGF) ವು ಶೇಕಡ ೮೦ ರಷ್ಟು ತಮಿಳರನ್ನು ಹೊಂದಿರುವ ಪ್ರದೇಶ. ಇಲ್ಲಿ ಎಲ್ಲ ವಹಿವಾಟುಗಳು ನಡೆಯುವುದು ತಮಿಳಿನಲ್ಲಿಯೇ (ಈ ಹೊತ್ತಿಗೂ ಸಹ). ಇಂಥ ಬೆಳವಣಿಗೆಗಳು ಕನ್ನಡಿಗರನ್ನು ದಂಗುಬಡಿಸಿವೆ. ಕೋಲಾರ ಹಾಗೂ ಇನ್ನುಳಿದ ಗಡಿ (ಪಿ.ಕೋಟ ಇತ್ಯಾದಿ) ಗಳಲ್ಲಿ ತೆಲುಗು ಶಾಲೆಗಳು, ವ್ಯವಹಾರಗಳು ಕನ್ನಡಿಗರ ಅಸ್ತಿತ್ವವನ್ನೇ ಪ್ರಶ್ನಿಸುವಂತೆ ಮಾಡಿದ್ದವು. ೧೯೬೦ರವರೆಗೂ ಈ ಭಾಗದ ಕನ್ನಡಿಗರು ಅಭ್ಯಾಸ ಮಾಡಿದ್ದು ತೆಲುಗು ಮಾಧ್ಯಮದಲ್ಲಿ. ಹೀಗಾಗಿ ಇಲ್ಲಿಯೂ ಕನ್ನಡತನವನ್ನು ಮೂಡಿಸಲು, ಕನ್ನಡದ ಶಾಲೆಗಳನ್ನು ತೆರೆಯಲು ಸ್ಥಳೀಯ ವ್ಯಕ್ತಿಗಳು, ಸಂಘ-ಸಂಸ್ಥೆಗಳು ಕಾರ್ಯನಿರತವಾದವು. ಸರ್ಕಾರದ ಅನೇಕ ಯೋಜನೆಗಳು, ಅಭಿವೃದ್ಧಿ ಕಾರ್ಯಗಳು ಈ ಭಾಗದ ಕನ್ನಡಿಗರನ್ನು ತಲುಪುತ್ತಲೇ ಇಲ್ಲ.[೬] ೧೯೬೦ರವರೆಗೂ ತಮಿಳು, ತೆಲುಗರ ಮಧ್ಯೆ ಅಲ್ಪಸಂಖ್ಯಾತರಾದ (ಈ ಹೊತ್ತಿಗೂ

ಪರಿಸ್ಥಿತಿಗಳು ಬದಲಾಗಿಲ್ಲ) ಕನ್ನಡಿಗರು ತಮ್ಮ ಮಿತಿಗಳಲ್ಲಿಯೇ ಪ್ರತಿಭಟನೆಗಳನ್ನು ವ್ಯಕ್ತಪಡಿಸುತ್ತಲೇ ಇದ್ದರು.

ತಮಿಳುನಾಡು ಸರ್ಕಾರವು ಹೊಸೂರು, ತಾಳವಾಡಿ, ನೀಲಗಿರಿ ಮೊದಲಾದ ಕನ್ನಡದ ನೆಲೆಗಳನ್ನು ತಮ್ಮವೆಂದು ವಾದಿಸಿ ಅವುಗಳನ್ನು ಉಳಿಸಿಕೊಳ್ಳುವ ಹುನ್ನಾರಗಳನ್ನು ಚಾಲ್ತಿಯಲ್ಲಿ ಇಟ್ಟಿತ್ತು. ಆದರೆ ಈ ಭಾಗದ ಕನ್ನಡಿಗರು ೧೯೫೬ರಿಂದಲೂ ತಮ್ಮ ಅಸ್ತಿತ್ವವನ್ನು ಕರ್ನಾಟಕ ಸರ್ಕಾರದೊಂದಿಗೆ ಗುರುತಿಸಿಕೊಳ್ಳಲು ಹಾತೊರೆದರು. ಇದರಿಂದ ತಮಿಳರ ಒತ್ತಡಗಳಿಗೆ ಬಲಿಯಾದದ್ದೇ ಹೆಚ್ಚು. ಕರ್ನಾಟಕ ಸರ್ಕಾರವು ಈ ಪ್ರದೇಶಗಳ ಬಗೆಗೆ ತೀವ್ರವಾಗಿ ಪ್ರತಿಕ್ರಿಯಿಸದೆ ಇದ್ದದ್ದು ಸ್ಥಳೀಯ ಕನ್ನಡ ಕಾರ್ಯಕರ್ತರನ್ನು ಕೆರಳಿಸಿತ್ತು. ಚಾಮರಾಜ ನಗರದ ತಾಳವಾಡಿಯಲ್ಲಿ ಶೇಕಡ ೬೦ಕ್ಕೂ ಹೆಚ್ಚು ಮಂದಿ ಕನ್ನಡ ಮಾತನಾಡುವವರೆ ಇದ್ದರು. ಆದರೆ ಇವರುಗಳ ಮೇಲೆ ತಮಿಳು ಭಾಷೆ, ಶಿಕ್ಷಣ, ಸಂಸ್ಕೃತಿಗಳನ್ನು ಹೇರಿ 'ತಮಿಳು ಭೂಮಿ'ಯನ್ನಾಗಿಸುವ ಹುನ್ನಾರಗಳು ನಡೆದವು. ಕನ್ನಡಿಗರು ಬೇರೊಂದು ಸರ್ಕಾರದಡಿಯಲ್ಲಿ ಸ್ವಂತಿಕೆಯನ್ನು ಕಳೆದುಕೊಳ್ಳುವಂತೆ ಆಗಿತ್ತು. ಈ ಕುರಿತು ತಾಳವಾಡಿ ನೀಲಗಿರಿ, ಹೊಸೂರುಗಳಲ್ಲಿನ ವ್ಯಕ್ತಿ, ಸಂಘ-ಸಂಸ್ಥೆಗಳ ಅಳಲು ಕರ್ನಾಟಕ ಸಾರ್ಕರವನ್ನು ಮುಟ್ಟಲೇ ಇಲ್ಲ. ಸಾಹಿತ್ಯ ಸಮ್ಮೇಳನಗಳಲ್ಲೂ ಪ್ರಸ್ತಾಪಿಸಲಾಯಿತು. ಆದರೆ ಎಲ್ಲ ಕಡೆಗಳಿಂದಲೂ ನಿರಾಶೆಗೊಂಡ ಕನ್ನಡಿಗರು ಏಕೀಕರಣ ಹಾಗೂ ಸರ್ಕಾರದ ವರ್ತನೆ ವಿರುದ್ಧ ಸಂಘಟಿತರಾದರು.

### ೩.೨.೬.೩ ಮಲೆಯಾಳಿ ಭಾಷಿಕರ ಅಧೀನತೆಯಲ್ಲಿ ಕನ್ನಡಿಗರು

ಕಾಸರಗೋಡು ಕನ್ನಡದ ಪ್ರದೇಶವಾದರೂ ಫಜಲ್ ಅಲಿ ಆಯೋಗದ ತೀರ್ಮಾನದಂತೆ ೧೯೫೬ರಲ್ಲಿ ಕೇರಳಕ್ಕೆ ಸೇರಿಕೊಂಡಿತು. ಇದನ್ನು ಪ್ರತಿಭಟಿಸುತ್ತಲೇ ಬರುತ್ತಿರುವ ಅಲ್ಲಿನ ಕನ್ನಡಿಗರು ಇಂದಿಗೂ ಯಶಸ್ಸನ್ನು ಪಡೆಯಲು ಆಗಿಲ್ಲ. ೧೯೬೦ರವರೆಗೂ ಈ ಭಾಗದವರು ಗೊಂದಲದಲ್ಲಿ ಸಿಲುಕುವಂತೆ ಆಗಿತ್ತು. ಕೇರಳ ಸರ್ಕಾರದ ಹಾಗೂ ಮಲೆಯಾಳಿ ಭಾಷಿಕರ ಅಧೀನತೆಯನ್ನು ಸಹಿಸುವುದು ಕಾಸರಗೋಡಿನ ಕನ್ನಡ ಚಳವಳಿಕಾರರಿಗೆ ಸರಿಬಾರದೆ ಪ್ರತಿಭಟಿಸುತ್ತಲೇ ಇದ್ದಾರೆ. ಈ ಭಾಗದ ಕನ್ನಡಿಗರು ಹಲವು ವೇದಿಕೆ, ಸಭೆ-ಸಮಾರಂಭ, ಸಾಹಿತ್ಯ ಸಮ್ಮೇಳಗಳಂಥವುಗಳ ಕಡೆ ಠರಾವುಗಳನ್ನು ಮಂಡಿಸಿ ಕಾಸರಗೊಡನ್ನು ಕರ್ನಾಟಕಕ್ಕೆ ಸೇರಿಸಲು ಹಾತೊರೆದರು. ಆದರೆ ಈ ಕುರಿತ ಸರ್ಕಾರದ ಮೌನವು ಇಲ್ಲಿನ ಕನ್ನಡಿಗರನ್ನು ತಮ್ಮ ಆಶಯದ ಈಡೇರಿಕೆಗಾಗಿ ವ್ಯವಸ್ಥಿತ ಕನ್ನಡ ಚಳವಳಿಯನ್ನೇ ರೂಪಿಸಿಕೊಳ್ಳುವಂತೆ ಮಾಡಿತು.

ಏಕೀಕರಣದ ಅನಂತರದಲ್ಲೂ ಕೆಂಗಲ್ ಹನುಮಂತಯ್ಯ, ನಿಜಲಿಂಗಪ್ಪ, ಬಿ. ಶಿವಮೂರ್ತಿ ಶಾಸ್ತ್ರಿ, ದೊಡ್ಡಮೇಟಿ ಅಂದಾನಪ್ಪ ಮೊದಲಾದ ರಾಜಕಾರಣಿ-ಸಾಹಿತಿ-ಕಲಾವಿದರ ಪ್ರಯತ್ನಗಳು ಸಹ ಪ್ರಯೋಜನಕ್ಕೆ ಬರಲಿಲ್ಲ. ಗಡಿಗಳಲ್ಲಿನ ಕನ್ನಡಿಗರು ಹಾಗೂ ಸಂಘಟನೆಗಳು ದ್ವಿಭಾಷಿಕ, ಬಹುಭಾಷಿಕ ಪರಿಸರದ ಸಮಸ್ಯೆ, ಆತಂಕಗಳಿಗೆ ಗುರಿಯಾಗಿ 'ಕನ್ನಡತನ'ವನ್ನೇ ಕಳೆದುಕೊಂಡಿದ್ದವು. ಈ ಸೋಲನ್ನು ಅನುಭವಿಸಿದ ಗಡಿನಾಡು ಕನ್ನಡಿಗರು ಏಕೀಕರಣದಿಂದಾದ ಅತಂತ್ರತೆಯನ್ನು ಹೇಳಿಕೊಳ್ಳಲು ವ್ಯವಸ್ಥಿತವಾದ ರೀತಿಯಲ್ಲಿ ಸಂಘಟಿತರಾಗಿದ್ದು ಗಮನಾರ್ಹ. ಆದರೆ ಇವರಿಗೆ ಸೂಕ್ತ ನಾಯಕತ್ವ, ಮಾರ್ಗದರ್ಶನದ

ಕೊರತೆಗಳು ಎದುರು ಆದವು. ಆಂಧ್ರ, ತಮಿಳುನಾಡು, ಕೇರಳ, ಮಹಾರಾಷ್ಟ್ರ ಸರ್ಕಾರಗಳೊಂದಿಗೆ ಹಂಚಿಹೋದ ಕನ್ನಡಿಗರು ತಮ್ಮ ಮಿತಿಗಳಲ್ಲಿಯೆ ನಾಡಿನಾದ್ಯಂತ ಚಳವಳಿ ಹೂಡಲು ಸಮಯ ಕಾಯುವಂತೆ ಆಗಿತ್ತು. ಆದರೆ ನಾಡಿನ ರಾಜಧಾನಿ ಬೆಂಗಳೂರಿನಲ್ಲಿಯೇ ಕನ್ನಡದ ವಾತಾವರಣ ಇಲ್ಲದೆ ಇದ್ದದ್ದು ಗಮನಿಸಬೇಕಾದ ಸಂಗತಿ.

### ೩.೨.೭ ರಾಜಧಾನಿ ಬೆಂಗಳೂರು ಮತ್ತು ಕನ್ನಡದ ಪರಿಸರ

ರಾಜಧಾನಿ ಬೆಂಗಳೂರು ಏಕೀಕರಣವಾದ ಮೇಲೆ ನಾಡು, ನುಡಿ, ಸಂಸ್ಕೃತಿಗಳ ಕೇಂದ್ರ ತಾಣವಾಗಿ ರೂಪುಗೊಳ್ಳುತ್ತದೆ ಹಾಗೂ ಭರವಸೆ ಮೂಡಿಸುತ್ತದೆ ಎಂದು ಕನಸು ಕಾಣಲಾಗಿತ್ತು. ಆದರೆ ಕನ್ನಡಿಗರ ಈ ಕನಸು ನನಸಾಗದೆ ಭ್ರಮನಿರಸನವನ್ನು ಉಂಟು ಮಾಡಿದ್ದೇ ಹೆಚ್ಚು. ಅದಕ್ಕಿತ ಯಂತ್ರಪಿದ್ದ ಕೇಂದ್ರ ಸ್ಥಳದಲ್ಲಿಯೆ ಕನ್ನಡಿಗರು ಕನ್ನಡೇತರರ ಗುಲಾಮರಾಗಿ ಬದುಕುವಂತೆ ಆಗಿತ್ತು. ಸ್ಥಳೀಯ ನಿರಾಶ್ರಿತರಾಗಿ ಬಾಳುವೆ ಮಾಡಬೇಕಾದ ಪ್ರಸಂಗ ಇವರದು. ದಿವಾನರುಗಳ ಕಾಲದಲ್ಲಿ ಹಾಗೂ ಸ್ವಾತಂತ್ರ್ಯದ ಅನಂತರ ಕನ್ನಡೇತರರ ವಲಸೆ ಹಳೆಯ ಮೈಸೂರಿನಲ್ಲಿ ಆರಂಭ ಆಗಿತ್ತು. ಬೆಂಗಳೂರಿಗೂ ಶಿಕ್ಷಣ, ಉದ್ಯೋಗ ಗಳನ್ನರಸಿ ಕನ್ನಡೇತರರು ಬಂದಿದ್ದರು. ಇವರಲ್ಲಿ ಬಹುಪಾಲು ತಮಿಳು ಭಾಷಿಕರೆ ಹೆಚ್ಚು. ಕಾರ್ಖಾನೆ-ಉದ್ದಿಮೆ-ಕಟ್ಟಡಗಳ ನಿರ್ಮಾಣದಲ್ಲಿ ತೊಡಗಿಸಿಕೊಂಡಿದ್ದ ಇವರು ಇಲ್ಲಿಯೇ ನೆಲೆಸಲು ಆರಂಭಿಸಿದ್ದರು. ಏಕೀಕರಣದ ನಂತರವಂತು ಬೆಂಗಳೂರು ನಗರ ಆರ್ಥಿಕವಾಗಿ ಅಭಿವೃದ್ಧಿ ಪಥ ಹಿಡಿದಿತ್ತು. ಕೇಂದ್ರ ಸರ್ಕಾರದ ಕಾರ್ಖಾನೆ-ಉದ್ದಿಮೆಗಳು ಅಸ್ತಿತ್ವಕ್ಕೆ ಬರತೊಡಗಿದ್ದವು. ಅವುಗಳಲ್ಲಿ ಐ.ಟಿ.ಐ., ಬಿ.ಇ.ಎಲ್., ಎಚ್.ಎಂ. ಟಿ., ಎಚ್. ಎ. ಎಲ್., ಮೈಕೋ ಮೊದಲಾದ ಕಾರ್ಖಾನೆಗಳು ಪ್ರಮುಖವಾದುವು. ಇಲ್ಲಿನ ಕಾರ್ಮಿಕರಲ್ಲಿ ತಮಿಳರೇ ಹೆಚ್ಚಿನ ಸಂಖ್ಯೆಯಲ್ಲಿ ಇದ್ದರು. ಕನ್ನಡ ಕಾರ್ಮಿಕರ ಸಂಖ್ಯೆ ತೀರ ಕಡಿಮೆ. ರಾಜ್ಯಗಳಲ್ಲಿ ಸ್ಥಾಪನೆ ಆಗುವ ಕೇಂದ್ರ ಸರ್ಕಾರದ ಉದ್ದಿಮೆ ಕಾರ್ಖಾನೆಗಳಲ್ಲಿ ಶೇಕಡ ೫೦ ರಷ್ಟು ಸ್ಥಳೀಯರನ್ನೇ ನೇಮಿಸಿಕೊಳ್ಳಲು ಆದೇಶ ನೀಡಲಾಗಿತ್ತು. ಆದರೆ ಅದು ಕಾರ್ಯಗತವಾಗಿರಲಿಲ್ಲ. ಬದಲಾಗಿ ಶೇಕಡ ೧೨-೧೫ ರಷ್ಟು ಮಾತ್ರ ಕನ್ನಡಿಗರನ್ನು ನೇಮಿಸಿಕೊಳ್ಳಲಾಗಿತ್ತು. ಹೀಗಾಗಿ ಕನ್ನಡೇತರರ ಪ್ರಾತಿನಿಧ್ಯ, ಹಾವಳಿಗಳೇ ಹೆಚ್ಚು.[೭] ಕಾರ್ಖಾನೆಗಳ ಒಳಗೆ ಹಾಗೂ ಹೊರಗೂ ತಮಿಳು ದೌರ್ಜನ್ಯಕಾರರಿಂದ ಹಿಂಸೆಗಳಿಗೆ ಒಳಗಾಗಬೇಕಾದ ಪರಿಸ್ಥಿತಿ ಕನ್ನಡಿಗರದು. ಕನ್ನಡ ನಾಡಿನಲ್ಲಿಯೇ ಸ್ಥಾಪನೆ ಆಗಿದ್ದ ಕಾರ್ಖಾನೆಗಳಲ್ಲಿ ತಮ್ಮ ಪ್ರಾತಿನಿಧ್ಯ, ಅಸ್ತಿತ್ವಗಳಿಗಾಗಿ ಹೆಣಗಾಡಬೇಕಾಯಿತು. ಕಾರ್ಮಿಕ ಸಂಘಟನೆಗಳು ತಮಿಳು ನಾಯಕ-ಸದಸ್ಯರಿಂದಲೇ ನಿಯಂತ್ರಿತವಾಗುತ್ತಿದ್ದವು. ಕನ್ನಡಿಗರು ಎಲ್ಲೂ ಕಾಣಿಸಿಕೊಳ್ಳುವಂತೆ ಇರಲಿಲ್ಲ.

ಬೆಂಗಳೂರಿನ ಜನನಿಬಿಡ ಸ್ಥಳಗಳಾದ ರೈಲ್ವೆ ನಿಲ್ದಾಣ, ಬಸ್ ನಿಲ್ದಾಣ (ಇಂದಿನ ಕೆಂಪೇಗೌಡ ಬಸ್ ನಿಲ್ದಾಣ), ಕೆಂಪೇಗೌಡ ರಸ್ತೆ (ಇಂದಿನ ಮೆಜೆಸ್ಟಿಕ್ ಪ್ರದೇಶ), ಗಾಂಧಿನಗರ (ಇಂದಿನ ಸಿನಿಮಾನಗರಿ) ಮೊದಲಾದ ಕಡೆಗಳಲ್ಲಿ (೧೯೬೦ರಲ್ಲಿ) ಕನ್ನಡಿಗರಿಗಿಂತ ತಮಿಳು ಮಾತನಾಡುವವರ ಹೆಚ್ಚು ಇದ್ದರು. ಅಲ್ಲದೆ ಕನ್ನಡ ನಾಮಫಲಕಗಳು ಇರಲಿಲ್ಲ. ಬದಲಾಗಿ ಇಂಗ್ಲಿಷ್ ಮತ್ತು ತಮಿಳಿನಲ್ಲಿಯೇ ಬರೆಸಲಾಗಿತ್ತು. ನಾಡಿನ ಇತರೆ ಕಡೆಗಳಿಂದ ರಾಜಧಾನಿಗೆ ಬರುತ್ತಿದ್ದ ಕನ್ನಡಿಗರಿಗೆ ತಮಿಳು ಹಾಗೂ ಇತರೆ ಭಾಷಿಕರಿಂದಲೆ ಸ್ವಾಗತ. ಕೂಲಿಗಳು, ಆಟೋರಿಕ್ಷಾ ಚಾಲಕ ಮೊದಲಾದವರಿಂದ ಹಿಡಿದು ಎಲ್ಲ ರಂಗಗಳಲ್ಲೂ

ತಮಿಳರೆ ಕಂಡುಬರುತ್ತಿದ್ದರು. ಇವರ ನಡುವೆ ಕನ್ನಡ ಭಾಷೆಯನ್ನು ಮಾತನಾಡುವವರು ವಿರಳ. ಅಂಚೆ, ತಂತಿ, ರೈಲ್ವೆ ಇಲಾಖೆಗಳಲ್ಲಿನ (ಕೇಂದ್ರ ಸರ್ಕಾರದಿಂದ ನೇಮಕಾತಿ ಆದವರು) ತಮಿಳರಷ್ಟೆ ಅಲ್ಲದೆ ಸಾರಿಗೆ, ಪೋಲೀಸ್ ಇಲಾಖೆಗಳಂಥ ರಾಜ್ಯ ಸರ್ಕಾರಿ ಹುದ್ದೆಗಳಲ್ಲೂ ತಮಿಳರನ್ನೇ ತುಂಬಲಾಗಿತ್ತು. ಕರ್ನಾಟಕ ಸರ್ಕಾರವೆ ತಮಿಳರನ್ನು ಈ ರೀತಿಯಲ್ಲಿ ನೇಮಕ ಮಾಡುತ್ತಿದ್ದುದರಿಂದ ಸಹಜವಾಗಿಯೆ ಉದ್ಯೋಗಗಳನ್ನರಸಿ ಬರುವವರ ಸಂಖ್ಯೆ (ಕನ್ನಡೇತರರ) ಬೆಂಗಳೂರಿನಲ್ಲಿ ಹೆಚ್ಚಾಗ ತೊಡಗಿತ್ತು. ಇಂಥ ತಮಿಳು ಪರಿಸರದಲ್ಲಿ ಕನ್ನಡದಲ್ಲಿ ಮಾತನಾಡುವವರಿಗೆ ಅವಮಾನವಾಗುತ್ತಿದ್ದುದು ಸಾಮಾನ್ಯವಾಯಿತು. ತಮಿಳರ ಅವಮಾನ, ಕೀಟಲೆಗಳಿಗೆ ಗುರಿಯಾದ ಕನ್ನಡಿಗರು ಅನೇಕ. ಆ ಪೈಕಿ ಶಿವಮೊಗ್ಗ ಕನ್ನಡ ಪರಿಸರದಿಂದ ಬಂದ ಕೋಣಂದೂರು ಲಿಂಗಪ್ಪ ಸಹ ಒಬ್ಬರು.

## ಟಿಪ್ಪಣಿಗಳು

೧. ಪ್ರಾಸಂಗಿಕವಾಗಿ ಕೆಲವು ಉದಾಹರಣೆಗಳನ್ನು ನೀಡಲಾಗಿದೆ.

೨. ನಾಡು-ನುಡಿಗಳ ಬಗೆಗೆ ಅಭಿಮಾನವನ್ನು ಮೂಡಿಸಲು ಹುಟ್ಟಿಕೊಂಡ ಪರಿಕಲ್ಪನೆಯೆ ಕನ್ನಡ-ಕರ್ನಾಟಕತ್ವ. ಇದನ್ನು ಟಂಕಿಸಿದವರು ಆಲೂರ ವೆಂಕಟರಾಯರು. ಹೆಚ್ಚಿನ ವಿವರಣೆಗಳಿಗೆ ನೋಡಿ; ಗೋವಿಂದರಾಜು, ಸಿ. ಆರ್., (೧೯೯೫), ಕನ್ನಡ-ಕರ್ನಾಟಕತ್ವ, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೩. ಅ.ನ.ಕೃ, ಕಟ್ಟೀಮನಿ, ಚದುರಂಗ, ತ.ರಾ.ಸು, ನಿರಂಜನ ಮೊದಲಾದವರು ಇದ್ದ ಈ ಗುಂಪಿನವರು ಪ್ರಜಾ ಸಮಾಜವಾದಿ ಪಕ್ಷದ ಸಾಹಿತ್ಯಕ-ಸಾಂಸ್ಕೃತಿಕ ಶಾಖೆಯಾಗಿ ಗುರುತಿಸಿಕೊಂಡರು.

೪. ಪದ್ಮರಾಜ ದಂಡವತಿ., 'ಚೆನ್ನಮ್ಮನ ನಾಡಿನಲ್ಲಿ ಕನ್ನಡಕ್ಕೆ ಕಂಟಕ', 'ಪ್ರಜಾವಾಣಿ' ದಿನಪತ್ರಿಕೆ (ಬೆಂ, ೨೭-೧೦-೧೯೯೬).

೫. ಕೋಣಂದೂರು ಲಿಂಗಪ್ಪ., (ಸಂ), 'ಶಾಸನ ಸಭೆಯಲ್ಲಿ ಶಾಂತವೇರಿ', (ಬೆಂ. ೧೯೮೭). ಪುಟ-೮೭-೮೮. ಶಾಂತವೇರಿ ಗೋಪಾಲ ಗೌಡರು ೨೩-೭-೧೯೫೩ರ ಶಾಸನ ಸಭೆಯಲ್ಲಿ ಬಳ್ಳಾರಿ ಸಮಸ್ಯೆಯನ್ನು ವಿಶೇಷವಾಗಿ ಪ್ರಸ್ತಾಪಿಸಿದರು. ಅಲ್ಲದೆ ತಾವು ಬಳ್ಳಾರಿಗೆ ಭೇಟಿ ನೀಡಿದ್ದಾಗ ಅಲ್ಲಿ ಬರೆಯಲಾಗಿದ್ದ 'ರಕ್ತಪಾತಮಾವುತುಂದಿ' (ರಕ್ತಪಾತವಾಗುತ್ತದೆ) ಎಂಬ ಗೋಡೆ ಬರೆಹಗಳ ಬಗ್ಗೆ ಆತಂಕ ವ್ಯಕ್ತಪಡಿಸಿದ್ದು ಉಂಟು.

೬. ಆರ್. ಕೃಷ್ಣಪ್ಪ ಪಾವಗಡ., 'ಗಡಿಮುಟ್ಟದ ಯೋಜನೆಗಳು' ಮತ್ತು 'ಅವಸಾನದ ಅಂಚಿನಲ್ಲಿ ಕನ್ನಡ ಶಾಲೆಗಳು' ಎಂಬ ಲೇಖನಗಳು. ಪ್ರಜಾವಾಣಿ, ೨೭-೧೦-೧೯೯೬.

೭. ಮುಗಳಿ, ರಂ. ಶ್ರೀ. (ಪ್ರ. ಸಂ.)., ಅಧ್ಯಕ್ಷರ ಭಾಷಣಗಳು. ಸಂ-೩, (ಕ.ಸಾ.ಪ), (ಬೆಂ. ೧೯೭೨) ಅ.ನ.ಕೃಷ್ಣರಾಯರ ಅಧ್ಯಕ್ಷೀಯ ಭಾಷಣದ ಉಲ್ಲೇಖ. ಪು. ೨೬೩.

❑❑

## ೪.೧.೧ ಕನ್ನಡ ಚಳವಳಿಯ ಮೊದಲ ಘಟ್ಟ

ಕನ್ನಡ ಚಳವಳಿ ಹಂತದಲ್ಲಿನ ಆರಂಭಿಕ ಘಟನೆಗಳು ಮಹತ್ವವನ್ನು ಪಡೆದಿವೆ. ಈ ಮೊದಲ ಘಟ್ಟದಲ್ಲಿ ಕನ್ನಡಿಗರಲ್ಲಿದ್ದ ಪ್ರಧಾನವಾದ ಕಾಳಜಿಯೆಂದರೆ ಎಲ್ಲ ರಂಗಗಳಲ್ಲೂ ಕನ್ನಡವನ್ನು ಅನುಷ್ಠಾನಗೊಳಿಸಬೇಕು ಎಂಬುದು. ಹೀಗಾಗಿ ಈ ಸಂದರ್ಭದ ಚಳವಳಿಗಳು 'ಕನ್ನಡ' ಮುಖ್ಯವಾಗಿದ್ದವೆ ಹೊರತು ಇನ್ನಾವ ವೈಯಕ್ತಿಕ ಅಥವ ರಾಜಕಾರಣದ ಸ್ವಾರ್ಥಗಳಿಗೆ ಒಳಗಾಗಿರಲಿಲ್ಲ. ಕನ್ನಡೇತರರ ಹಾವಳಿಗಳಿಂದ ಬೆಂಗಳೂರಿನ ಕನ್ನಡಿಗರು ಎಲ್ಲ ರೀತಿಯಿಂದಲೂ ಸಹಿಸಿಕೊಳ್ಳುವ ಮನೋಭಾವವನ್ನು ಬೆಳೆಸಿಕೊಂಡಿದ್ದರು. ಅದು ಎಷ್ಟರ ಮಟ್ಟಿಗೆ ಎಂದರೆ ಇಲ್ಲಿನವರೆಲ್ಲ ಸಹನಶೀಲರೆಂಬುವಷ್ಟರ ಮಟ್ಟಿಗೆ. ಯಾವುದೇ ರೀತಿಯ ಪ್ರತಿಕ್ರಿಯೆ, ಪ್ರತಿಘಟನೆಗಳು ಸೃಷ್ಟಿ ಆಗಿರಲಿಲ್ಲ. ಅಂಥ ಮೊದಲ ಪ್ರತಿಘಟನೆ, ಪ್ರತಿಕ್ರಿಯೆಗಳು ವ್ಯಕ್ತ ಆಗಿದ್ದು ಶಿವಮೊಗ್ಗದ (ಬೆಂಗಳೂರಿನ ಹೊರಗಡೆಯಿಂದ ಬಂದ) ಕೋಣಂದೂರಿನ ಲಿಂಗಪ್ಪನವರಿಂದ.

### ೪.೧.೨ ಚಳವಳಿಗೆ ಕೋಣಂದೂರು ಲಿಂಗಪ್ಪನವರ ಪ್ರವೇಶ

ಕೋಣಂದೂರು ಲಿಂಗಪ್ಪನವರನ್ನು ಕನ್ನಡ ಚಳವಳಿಯ ಸಂದರ್ಭದಲ್ಲಿ ದಾಖಲಿಸುವ ಅಗತ್ಯತೆ ಇದೆ. ಇದಕ್ಕೆ ಅಂದಿನ ಚಾರಿತ್ರಿಕ ಸನ್ನಿವೇಶವೂ ಕಾರಣ. ಲಿಂಗಪ್ಪನವರು ಕನ್ನಡ ಚಳವಳಿಗೆ ಬೇಕಾದ ಆರಂಭಿಕ ಚಾಲನೆ ನೀಡಿದವರು. ಚಳವಳಿಗಾಗಿ ವೇದಿಕೆಯನ್ನು ನಿರ್ಮಿಸಿಕೊಟ್ಟ ಯುವಕರ ಪೈಕಿ ಮೊದಲಿಗರು ಎಂದರೂ ತಪ್ಪಿಲ್ಲ. ನಾಡು-ನುಡಿ ಕಾಳಜಿಗಳನ್ನು ಹೊತ್ತಿದ್ದ ಕೆಲವೇ ರಾಜಕಾರಣಿಗಳಲ್ಲಿ ವಾಮಪಂಥಿಯರ ಸಂಖ್ಯೆಯೆ ಹೆಚ್ಚು. ಅಂಥವರಲ್ಲಿ ಸಮಾಜವಾದಿ ಪಕ್ಷದ ಧುರೀಣ ಶಾಂತವೇರಿ ಗೋಪಾಲಗೌಡರು ಪ್ರಮುಖರು. ಇವರು ತಾತ್ವಿಕ ಚಿಂತನೆಗಳನ್ನು ಮೈಗೂಡಿಸಿಕೊಂಡ ಆಪ್ತರು, ಶಿಷ್ಯರುಗಳು ಅನೇಕರಿದ್ದಾರೆ. ಅಂಥ ಶಿಷ್ಯರುಗಳಲ್ಲಿ ಕೋಣಂದೂರು ಲಿಂಗಪ್ಪ ಸಹ ಒಬ್ಬರು. ೧೯೬೭ರ ಚುನಾವಣೆಯಲ್ಲಿ ಶಾಂತವೇರಿ ಅವರು ಸೋತಮೇಲೆ ಲಿಂಗಪ್ಪನವರು ಜನಪರ, ಕನ್ನಡ ಪರವಾದ ತಾತ್ವಿಕತೆಗಳೊಂದಿಗೆ ಮೈಸೂರು ಸೇರಿದ್ದರು. ಇವರು ಮೈಸೂರು ಸೇರುವುದಕ್ಕೆ ಯು. ಆರ್. ಅನಂತಮೂರ್ತಿ ಕಾರಣ. ಲೋಹಿಯಾ ಒಡನಾಡಿಗಳಾಗಿದ್ದ ಶಾಂತವೇರಿ, ಅನಂತಮೂರ್ತಿ ಮೊದಲಾದವರು ಲಿಂಗಪ್ಪನವರನ್ನು ಹತ್ತಿರದಿಂದ ಬಲ್ಲವರು. ಹೀಗಾಗಿ ಅನಂತಮೂರ್ತಿ ಅವರು ಇಂಗ್ಲೀಷ್ ಅಧ್ಯಾಪಕರಾಗಿದ್ದಾಗಲೇ ಲಿಂಗಪ್ಪನವರನ್ನು ೧೯೬೭ರವರೆಗೂ ಶಿವಮೊಗ್ಗದ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ಓದಲು ಪ್ರೋತ್ಸಾಹಿಸಿದ್ದರು. ಅನಂತರ ಬಿ. ಎ. ಶಿಕ್ಷಣಕ್ಕಾಗಿ ಮೈಸೂರಿಗೆ ಬರಬೇಕಾಯಿತು. ಗೆಳೆಯ ಪೂರ್ಣಚಂದ್ರ ತೇಜಸ್ವಿ ಅವರ ಸಹಕಾರದಿಂದ ಮಹಾರಾಜ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಂದುವರೆಸಿದ್ದರು.

ಬೆಂಗಳೂರಿನಲ್ಲಿ ಆದ ಘಟನೆಯೊಂದರಿಂದ ಲಿಂಗಪ್ಪನವರು ಕನ್ನಡ ಚಳವಳಿಗೆ ತಮ್ಮನ್ನು ತಾವು ತೊಡಗಿಸಿಕೊಳ್ಳುವಂತೆ ಆಗಿತ್ತು. ಅಂದರೆ ತಮ್ಮ ರಾಜಕೀಯ ಗುರುಗಳಾಗಿದ್ದ ಶಾಂತವೇರಿ ಅವರನ್ನು ಬೆಂಗಳೂರಿನಲ್ಲಿ ಕಾಣಲು ಬರಬೇಕಿತ್ತು. ಹೀಗಾಗಿ ಪರಿಚಿತವಲ್ಲದ ಬೆಂಗಳೂರಿನ ರೈಲು ನಿಲ್ದಾಣದಲ್ಲಿ ಇಳಿದು ಅಲ್ಲಿದ್ದವರ ಬಳಿ ಶಾಂತವೇರಿ ಅವರು ಇರುತ್ತಿದ್ದ ಪೂರ್ಣಯ್ಯ ಛತ್ರದ ರಸ್ತೆಯ ವಿಳಾಸವನ್ನು ವಿಚಾರಿಸಿದರು. ಆದರೆ ಲಿಂಗಪ್ಪನವರು ಕನ್ನಡದಲ್ಲಿ ವಿಳಾಸ ಕೇಳಿದ್ದೇ ಅಲ್ಲಿದ್ದ ತಮಿಳರಿಗೆ ಸಹಿಸಲು ಆಗದೆ ಇವರ ಮುಖಕ್ಕೆ ತಿವಿದು, ಗೇಲಿ ಮಾಡಿ, ಅವಮಾನ ಮಾಡಿದ್ದೂ ಉಂಟು. ಕನ್ನಡ ನಾಡಿನಲ್ಲಿ ಕನ್ನಡದಲ್ಲಿ (ಅದರಲ್ಲೂ ರಾಜಧಾನಿ ಬೆಂಗಳೂರಿನಲ್ಲಿಯೇ) ಮಾತನಾಡುವುದೇ ದುಸ್ತರ ಎಂಬುದನ್ನು ಮನವರಿಕೆ ಮಾಡಿಕೊಟ್ಟಿತು ಅಂದಿನ ಈ ಘಟನೆ. ಇದರಿಂದ ನೊಂದ ಲಿಂಗಪ್ಪ ಮತ್ತೆ ಬೆಂಗಳೂರಿಗೆ ಬರುವುದಾದರೆ ಕನ್ನಡದ ಚಳವಳಿ ಹೂಡಿ, ಕನ್ನಡದ ಬಾವುಟವನ್ನು ಹಾರಿಸಲು ಮಾತ್ರವೇ ಬರಬೇಕು ಎಂದು ಹಠತೊಟ್ಟು ಮೈಸೂರಿಗೆ ಹಿಂತಿರುಗಿದ್ದರು. ಮೈಸೂರಿನಲ್ಲಿ ಕವಿ ಕುವೆಂಪು ಅವರ ಕನ್ನಡ ಕಳಕಳಿಯ ಹಿನ್ನೆಲೆಯಲ್ಲಿ ತೇಜಸ್ವಿ, ಕೆ. ಆರ್. ಶಾಮಣ್ಣ, ಕೆ. ಎಚ್. ಶ್ರೀನಿವಾಸ ಮೊದಲಾದವರೊಂದಿಗೆ ಲಿಂಗಪ್ಪನವರು ಸಹ ಕನ್ನಡದ ಕೆಲಸಗಳಲ್ಲಿ ತೊಡಗಿಸಿಕೊಂಡರು.[೧]

**೪.೨.೧ 'ಕನ್ನಡ ಯುವಜನ ಸಭಾ' ಮತ್ತು 'ಅಂಗ್ರೇಜಿ ಹಠಾವೋ' ಚಳವಳಿ**

ದೆಹಲಿಯಲ್ಲಿ ಈ ಘಟ್ಟದಲ್ಲಿಯೇ ಲೋಹಿಯಾ ಅವರು ಸಾಮ್ರಾಜ್ಯಶಾಹಿ ಇಂಗ್ಲೀಷ್ ಭಾಷೆ ಬಳಕೆಯ ವಿರುದ್ಧ 'ಅಂಗ್ರೇಜಿ ಹಠಾವೋ' ಚಳವಳಿಗೆ ಕರೆ ಕೊಟ್ಟಿದ್ದರು.[೨] ಅಂದು, ಆಯಾ ರಾಜ್ಯಗಳಲ್ಲಿ ಆಡುವ ಪ್ರಾಂತೀಯ ಭಾಷೆಗಳಿಗೆ ಪ್ರಾತಿನಿಧ್ಯ ದೊರೆತು ಹಿಂದಿಯನ್ನು ಐಚ್ಛಿಕವಾಗಿಸಬೇಕು ಎಂಬ ವಾದ ಸೋಷಿಯಲಿಷ್ಟರದಾಗಿತ್ತು. ಇದರಿಂದ ಕನ್ನಡಕ್ಕೆ ದೊರೆಯಬೇಕಾದ ಪ್ರಾತಿನಿಧ್ಯದ ಬಗ್ಗೆ ಶಾಂತವೇರಿ, ಕುವೆಂಪು, ಅನಂತಮೂರ್ತಿ, ಲಿಂಗಪ್ಪ ಮೊದಲಾದವರು ಯೋಚಿಸಿದರು. ನೇರವಾಗಿ 'ಅಂಗ್ರೇಜಿ ಹಠಾವೋ' ಚಳವಳಿಗೆ ಧುಮುಕಿದರೆ ಜನ ಬೆಂಬಲ ದೊರೆಯುವುದಿಲ್ಲ ಎಂಬುದು ಲಿಂಗಪ್ಪನವರ ವಾದ. 'ಕನ್ನಡ ಚಳವಳಿ'ಗೆ ನಾಂದಿ ಹಾಡುವುದರ ಮುಖೇನ 'ಅಂಗ್ರೇಜಿ' (ಇಂಗ್ಲಿಷ್) ವಿಷಯಕ್ಕೆ ಬರಲು ನಿರ್ಧರಿಸಿದರು.[೩] ನಾಡು-ನುಡಿ ಹೆಸರಿನಲ್ಲಿ ಮೊಟ್ಟ ಮೊದಲ ಬಾರಿಗೆ (೧೯೫೭ರಲ್ಲಿ) ಸಂಘಟಿತರಾಗಲು ಲಿಂಗಪ್ಪನವರಂಥ ಕೆಲವೇ ಉತ್ಸಾಹಿ ತರುಣರು ಒಂದು ಸಭೆ ಸೇರಿದ್ದು ಗಮನಾರ್ಹ. ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್ಸ್‌ಟ್ಯೂಟಿನ ಬಳಿ (ಈ ಹೊತ್ತಿನ ದಾಸ್ ಪ್ರಕಾಶ್ ಹೋಟೆಲ್ ಬಳಿ) ಸಮಾನ ಮನಸ್ಕ ಯುವಕರ ಸಭೆ ಸೇರಿ ಚರ್ಚಿಸಿತು. ಇದರ ಪರಿಣಾಮವೇ 'ಕನ್ನಡ ಯುವಜನ ಸಭಾ'ದ ಸ್ಥಾಪನೆ. ಬಹುಪಾಲು ಯುವಕರೆ ಇದ್ದ ಈ ಸಭೆಗೆ ಅದೇ ಹೆಸರನ್ನೇ ಇಟ್ಟದ್ದು ಸಮಂಜಸವಾಗಿತ್ತು.[೪]

ಏಕೀಕರಣೋತ್ತರ ಕರ್ನಾಟಕದ ಕನ್ನಡ ಸಂಘಟನೆಗಳಲ್ಲಿ 'ಕನ್ನಡ ಯುವಜನ ಸಭಾ'ದ ಸ್ಥಾಪನೆ ಚಳವಳಿ ಚರಿತ್ರೆಯಲ್ಲಿಯೇ ಮೊದಲನೆಯದು. 'ಸಭಾ'ದ ಯುವಕರು ಈ ರೀತಿಯಲ್ಲಿ ಸಂಘಟಿತರಾಗಲು ಕಾರಣರಾದವರು ಲಿಂಗಪ್ಪನವರೆ. ಆದ್ದರಿಂದ ಅವರನ್ನೇ ಸಂಚಾಲಕರನ್ನಾಗಿ ಆಯ್ಕೆ ಮಾಡಿಕೊಳ್ಳಲಾಯಿತು. 'ಸಭಾ'ದ ಮೊದಲನೆಯ ಪ್ರತಿಭಟನೆ

ಇಂಗ್ಲಿಷಿನ ವಿರುದ್ಧವಾಗಿತ್ತು. ಈ ಕುರಿತ ಲೋಹಿಯಾ ಅವರ ಚಿಂತನೆಗಳಿಗೆ (ಮೈಸೂರಿನಲ್ಲಿ) ಸ್ಪಂದಿಸುವುದೆ 'ಸಭಾ'ದವರ ಕಾರ್ಯಕ್ರಮಗಳಾಗಿದ್ದವು.

### ೪.೨.೨ 'ಸಭಾ'ದ ಯುವಕರಿಗೆ ಕುವೆಂಪು ಪ್ರೇರಣೆ

ಇಂಡಿಯಾದಾದ್ಯಂತ ಇಂಗ್ಲೀಷ್ ಭಾಷೆಗೆ ವ್ಯಕ್ತವಾದ ವಿರೋಧಗಳು ಮೈಸೂರಿನಲ್ಲಿ ಕುವೆಂಪು ಮೊದಲಾದವರನ್ನು ಪ್ರತಿಕ್ರಿಯಿಸುವಂತೆ ಮಾಡಿದ್ದವು. ೧೯೫೭ರ ಸಂದರ್ಭದಲ್ಲಿಯೆ 'ಅಖಿಲ ಭಾರತ ಇಂಗ್ಲಿಷ್ ಪ್ರಾಧ್ಯಾಪಕರ ಸಭೆ'ಯೊಂದನ್ನು ಮೈಸೂರಿನಲ್ಲಿ ನಡಸಲು ಯೋಜಿಸಲಾಗುತ್ತಿತ್ತು. ಇಂಗ್ಲಿಷ್ ಭಾಷಾ ಬಳಕೆಯ ಪರ ಹಾಗೂ ವಿರುದ್ಧ ನೆಲೆಗಳಲ್ಲಿ ಪ್ರಬಂಧ, ಚರ್ಚೆಗಳು ನಡೆಯಲಿದ್ದವು. ಈ ಸಭೆಯ ನೇತೃತ್ವವನ್ನು ವಹಿಸಿಕೊಂಡಿದ್ದವರು ಅಂದು ಖ್ಯಾತ ಇಂಗ್ಲಿಷ್ ಪ್ರಾಧ್ಯಾಪಕರೆನ್ನಿಸಿದ್ದ ಎಸ್. ವಿ. ರಂಗಣ್ಣನವರು. ಅಂತೆಯೇ ಈ ಸಭೆಯ ಅಧ್ಯಕ್ಷತೆಯನ್ನು ಕುವೆಂಪು ಅವರನ್ನೇ ವಹಿಸಿಕೊಳ್ಳುವಂತೆ ಕೇಳಿಕೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ಭಾಷಾವಾರು ರಾಜ್ಯಗಳಲ್ಲಿ ಇಂಗ್ಲಿಷ್ ಏಕೆ ಬೇಡವಾಗುತ್ತದೆ ಎಂಬುದನ್ನು ಮನವರಿಕೆ ಮಾಡಿಕೊಡುವ ಜರೂರು ಇತ್ತು. ಈ ಬಗ್ಗೆ ಕುವೆಂಪು ಅವರು ಲಿಂಗಪ್ಪ, ತೇಜಸ್ವಿ ಮೊದಲಾದ 'ಸಭಾ'ದ ಯುವಕರಿಗೆ ಯೋಚಿಸಲು ಹೇಳಿದ್ದರು. ಅಲ್ಲದೆ ಅದಕ್ಕೆ ಬೇಕಾಗುವ ಕರಪತ್ರಗಳನ್ನು ಸಿದ್ಧಪಡಿಸಿ ಹಂಚಲು ಹತ್ತು ರೂಪಾಯಿಗಳನ್ನು ಕೊಟ್ಟದ್ದೂ ಉಂಟು. ಕನ್ನಡದ ಈ ಕೆಲಸಕ್ಕೆ ಲಿಂಗಪ್ಪ ಮೊದಲಾದವರು ಇಂಗ್ಲಿಷಿನಲ್ಲಿಯೆ ಇಂಗ್ಲಿಷಿನ ವಿರುದ್ಧ ಕರಪತ್ರಗಳನ್ನು ಸಿದ್ಧಪಡಿಸಬೇಕಿತ್ತು. ಈ ಕಾರ್ಯಕ್ಕೆ ನೆರವಾದವರು ಇಂಗ್ಲಿಷಿನ ಅಧ್ಯಾಪಕರಾಗಿದ್ದ ಯು. ಆರ್. ಅನಂತಮೂರ್ತಿ. ಕನ್ನಡ ಚಳವಳಿಯ ಆರಂಭಿಕ ಚಾಲನೆ ದೊರೆತದ್ದು 'ಯುವಜನ ಸಭಾ'ದ ಯುವಕರಿಂದಲೆ. ಅದು ರಾಷ್ಟ್ರಮಟ್ಟದ ಇಂಗ್ಲಿಷ್ ಪ್ರಾಧ್ಯಾಪಕರ ಸಭೆಯಲ್ಲಿ ಈ ಕರಪತ್ರಗಳನ್ನು ಹಂಚುವುದರ ಮುಖೇನ ಆರಂಭಗೊಂಡಿತ್ತು. ಇದರೊಂದಿಗೆ ಲೋಹಿಯಾ ಅವರು ಸಹ 'ಅಂಗ್ರೇಜಿ ಹಟಾವೋ' ಚಳವಳಿಯನ್ನು ತೀವ್ರಗೊಳಿಸಿದ್ದರು.

ಬೆಂಗಳೂರಿನಲ್ಲಿ ಕನ್ನಡೇತರರಿಂದ (ತಮಿಳರು) ಅವಮಾನಿತರಾಗಿದ್ದ ಕೋಣಂದೂರು ಲಿಂಗಪ್ಪನವರು ಸಭಾದ ಸಂಚಾಲಕರಾದ ಮೇಲೆ ಕನ್ನಡ ನಾಡಿಗೆ ವ್ಯಾಪಿಸುವ ಚಳವಳಿಯನ್ನು ಹೂಡಲು ಬೇಕಾದ ಎಲ್ಲ ಪೂರ್ವಭಾವಿ ಸಿದ್ಧತೆಗಳ ಕಡೆಗೆ ಗಮನ ಹರಿಸಿದ್ದರು. ಅವರು ಬೆಂಗಳೂರನ್ನು ಪ್ರವೇಶಿಸುವುದಕ್ಕ ಮೊದಲು ರಾಜ್ಯದ ಇತರೆ ಜಿಲ್ಲೆಗಳಲ್ಲಿ 'ಸಭಾ'ದ ಶಾಖೆಗಳನ್ನು ಸ್ಥಾಪಿಸುವ ನಿಟ್ಟಿನಲ್ಲಿ ಯೋಚಿಸಿದ್ದು ಉಂಟು. ಅಲ್ಲದೆ ಆ ಮೂಲಕ ಕನ್ನಡಿಗರ ಸಂಘಟನೆ ಸಾಧ್ಯ ಎಂದು ನಂಬಿದ್ದರು. ಅದರಂತೆ ರಾಜ್ಯದ ಎಲ್ಲೆಡೆ ಪ್ರವಾಸ ಕೈಗೊಂಡರು. ಧಾರವಾಡ, ಗುಲ್ಬರ್ಗಾ, ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು, ಮೈಸೂರು, ಶಿವಮೊಗ್ಗ ಮೊದಲಾದ ಜಿಲ್ಲೆಗಳಲ್ಲಿ ೧೧೦ಕ್ಕೂ ಹೆಚ್ಚಿನ 'ಸಭಾ'ದ ಶಾಖೆಗಳನ್ನು ತೆರೆದು ಸಂಘಟಿಸಲಾಯಿತು. ಏಕೀಕರಣೋತ್ತರ ಕರ್ನಾಟಕದ ಅನೇಕ ಸಮಸ್ಯೆ, ಆತಂಕ, ಅಸಮಧಾನಗಳಿಗೆ ಈ 'ಕನ್ನಡ ಯುವಜನ ಸಭಾ'ದ ಆಶಯಗಳು ಮೆಚ್ಚುಗೆ ಗಳಿಸಿ ಕನ್ನಡಿಗರು ಸಂಘಟಿತರಾಗತೊಡಗಿದರು. ಕರ್ನಾಟಕದ ಶ್ರೇಯೋಭಿವೃದ್ಧಿಗಾಗಿ 'ಸಭಾ'ವು ಕನ್ನಡಿಗರನ್ನು ಒಂದುಗೂಡಿಸುವ ಕಾರ್ಯಕ್ರಮಗಳಲ್ಲಿ ೧೯೫೮ರ ರವರೆಗೂ ತೊಡಗಿಸಿಕೊಂಡಿತ್ತು. ಈ ಮಧ್ಯೆ ಅಂದಿನ ಕರ್ನಾಟಕ ಸಾಹಿತ್ಯ ಪರಿಷತ್ತಿನ

ಅಧ್ಯಕ್ಷರಾಗಿದ್ದ ಬಿ. ಶಿವಮೂರ್ತಿ ಶಾಸ್ತ್ರಿ ೪೨ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ತಯಾರಿಗಳನ್ನು ನಡೆಸುತ್ತಿದ್ದರು. ಮುಂದಿನ ಸಮ್ಮೇಳನಾಧ್ಯಕ್ಷರು ಖ್ಯಾತ ಕಾದಂಬರಿಕಾರರಾಗಿದ್ದ ಅ.ನ.ಕೃಷ್ಣರಾಯರು ಎಂದು ಘೋಷಿಸಲಾಯಿತು. ಈ ಸಮ್ಮೇಳನವು ಮಣಿಪಾಲದಲ್ಲಿ ನಡೆಯಲಿದೆ ಎಂದು ತೀರ್ಮಾನವೂ ಆಗಿತ್ತು.

**೪.೨.೩ ಕನ್ನಡ ಚಳವಳಿಗೆ ಅ.ನ.ಕೃ ಪ್ರವೇಶ**

ಅ.ನ.ಕೃ ಅವರು ೧೯೫೯ರ ವೇಳೆಗಾಗಲೆ ನಾಡಿನ ಎಲ್ಲೆಡೆ ಸಂಚರಿಸಿ ಕನ್ನಡಿಗರ ನಾಡಿ ಮಿಡಿತವನ್ನು ಬಲ್ಲವರಾಗಿದ್ದರು. ಏಕೀಕರಣದ ಅನಂತರದಲ್ಲಿ ಉಂಟಾಗಿದ್ದ ಕನ್ನಡಿಗರ ಭ್ರಮನಿರಸನ ಯಾವ ರೀತಿಯದು ಎಂಬುವುದರ ಬಗೆಗೆ ಅರಿವು ಮೂಡಿತ್ತು. ಏಕೀಕರಣ ಆಶಯವು ನಿರೀಕ್ಷಿಸಿದ್ದ ಗುರಿ ಮುಟ್ಟದೇ ಇದ್ದದ್ದು, ವಿಶಾಲ ಕರ್ನಾಟಕಕ್ಕೆ 'ವಿಶಾಲ ಮೈಸೂರು' ಎಂದು ಹೆಸರಿಟ್ಟಿದ್ದು, ರಾಜಕಾರಣಿಗಳು ಜಾತಿ-ವೈಷಮ್ಯಗಳನ್ನು ಬಿತ್ತಿದ್ದು, ಗಡಿಸಮಸ್ಯೆಗಳ ಉಲ್ಬಣತೆ, ಕನ್ನಡೇತರರಿಂದ ಕನ್ನಡಿಗರ ಮೇಲಿನ ಒತ್ತಡ ಮೊದಲಾದುವುಗಳು ಖುಷಿಕೊಟ್ಟಿರಲಿಲ್ಲ. ಈ ಹಿನ್ನೆಲೆಯಲ್ಲಿಯೆ ಅ.ನ.ಕೃ ಅವರು -

> "ರಾಜಕೀಯ ದೃಷ್ಟಿಯಿಂದ ನಮಗೊಂದು ಪ್ರಾಂತ್ಯ ಲಭಿಸಿದರೂ ಇದಿನ್ನೂ 'ಕನ್ನಡ ಪ್ರಾಂತ್ಯ'ವಾಗಿಲ್ಲ. ಒಂದು ಭಾಗದ ಕನ್ನಡಿಗರಿಗೂ, ಇನ್ನೊಂದು ಭಾಗದ ಕನ್ನಡಿಗರಿಗೂ ಸ್ನೇಹ, ಸೌಹಾರ್ದ ಬೆಳೆಯುವುದರ ಬದಲು ಈರ್ಷ್ಯೆ, ವೈಷಮ್ಯಗಳು ಹೆಚ್ಚಿವೆ. ಹಳೆಯ ಮೈಸೂರು, ಹೊಸ-ಮೈಸೂರು ಭಿನ್ನ ಭಿನ್ನ ಭಾಗಗಳಾಗಿ ನಿತ್ಯ ಕಲಹ ಕದನಗಳಲ್ಲಿ ಉದ್ಯುಕ್ತವಾಗಿವೆ. ಕನ್ನಡಿಗರೆಲ್ಲರ ಹೃದಯ ಬೆಸೆದು, ಅವರಲ್ಲಿ ಉತ್ಕಟ ಕನ್ನಡಾಭಿಮಾನವನ್ನು ಹುಟ್ಟಿಸುವ ಕೆಲಸ ಇನ್ನೂ ಉಳಿದೇ ಇದೆ. ಈ ನಾಡನ್ನು ಒಂದುಗೂಡಿಸಲು ಹಿಂದೊಮ್ಮೆ ಹೊರಟ ಕನ್ನಡ ಭಂಟರು, ಮತ್ತೆ ಈ ಕೆಲಸಕ್ಕೆ ಟೊಂಕಕಟ್ಟಿ ನಿಲ್ಲಬೇಕು. ರಾಜಕಾರಣಿಗಳ ಕೈಗೆ ಸಿಕ್ಕಿ ಕರ್ನಾಟಕ ಮತ್ತೆ ಹಾಳು ಹೋಳಾಗುವುದಕ್ಕೆ ನಾವು ಅವಕಾಶಕೊಡ ಬಾರದು"[೫]

- ಎನ್ನುವುದರ ಮೂಲಕ 'ಕನ್ನಡ ಭಂಟರ' ಪ್ರವೇಶ, ಅವಶ್ಯಕತೆಗಳೊಂದಿಗೆ ಸಾರ್ವಜನಿಕವಾದ ಕನ್ನಡ ಚಳವಳಿಗೆ ಸಂಘಟಿತರಾಗಲು ಕರೆಕೊಟ್ಟದ್ದು. ಈ ಕರೆಗೆ ಸ್ಪಂದಿಸಿದವರು ಕನ್ನಡ ಯುವಜನ ಸಭಾದ ಕಾರ್ಯಕರ್ತರೇ ಆಗಿದ್ದಾರೆ.

ಪರಿಷತ್ತಿನ ೪೨ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಮಣಿಪಾಲದಲ್ಲಿ ನಡೆಸುವುದೆಂದು ತೀರ್ಮಾನ ಆಗಿತ್ತು. ಈ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ ಆಗಿದ್ದವರು ಅ.ನ.ಕೃ. ಹೀಗಾಗಿ ಸಮ್ಮೇಳನಾಧ್ಯಕ್ಷರನ್ನು ಸನ್ಮಾನಿಸುವ ಆಹ್ವಾನಗಳು ನಾಡಿನ ಎಲ್ಲ ಕಡೆಗಳಿಂದಲೂ ಅ.ನ.ಕೃ ಅವರಿಗೆ ಬರಲಾರಂಭಿಸಿದ್ದವು. ಕರೆದೆಡೆಗಳಿಗೆ ಹೋಗಿ ನಾಡು-ನುಡಿಗಳ ಬಗ್ಗೆ, ಪ್ರಚಲಿತ ಸಮಸ್ಯೆಗಳ ಬಗ್ಗೆ ಎಚ್ಚೆತ್ತುಕೊಳ್ಳುವಂತೆ ಕನ್ನಡಿಗರಿಗೆ ಕರೆ ನೀಡುವುದು ಅ.ನ.ಕೃ ಅವರಿಗೆ ವಾಡಿಕೆ ಆಗಿತ್ತು. ಅಂತೆಯೇ ರಾಜಕಾರಣಿಗಳ ಸ್ವಾರ್ಥ, ಪಿತೂರಿಗಳಿಗೆ ಬಲಿಯಾಗದಿರಲು ಎಚ್ಚರಿಸುವುದನ್ನು ಹೇಳದೆ ಮರೆಯುತ್ತಿರಲಿಲ್ಲ. ಅ.ನ.ಕೃ

ಅವರಿಗೆ ರಾಜಕಾರಣಿಗಳ ಅದರಲ್ಲೂ ಕಾಂಗ್ರೆಸ್ಸಿಗರ ಬಗ್ಗೆ ಸಿಟ್ಟು ಇತ್ತು. ಕಾಂಗ್ರೆಸ್ಸಿನಲ್ಲಿದ್ದ ಕೆಲವು ರಾಜಕಾರಣಿಗಳು ವ್ಯವಸ್ಥಿತವಾಗಿ ಇವರ ವ್ಯಕ್ತಿತ್ವಕ್ಕೆ ಧಕ್ಕೆ ತರುವ ಪ್ರಯತ್ನಗಳನ್ನು ಮಾಡುತ್ತಿದ್ದುದು ಉಂಟು. ಬಹುಶಃ ಇದಕ್ಕೆ ಕಾರಣ ಅ.ನ.ಕೃ. ಅವರು ಕಾಂಗ್ರೆಸ್ಸಿಗರ (ಹಿಂದಿ ಪರ ಪ್ರಚಾರ ಮಾಡುತ್ತಿದ್ದ ಕನ್ನಡ ವಿರೋಧಿ ಕೆಲಸಗಳನ್ನು) ರಾಷ್ಟ್ರ ಭಾಷಾ ಧೋರಣೆಗಳಿಗೆ ವಿರುದ್ಧ ನಡೆದುಕೊಳ್ಳುತ್ತಿದ್ದುದು. ೧೯೩೦ರ ದಶಕದಿಂದಲೇ ಅ.ನ.ಕೃ ಅವರು ಹಿಂದಿಯಿಂದ ಕನ್ನಡಕ್ಕೆ ಕುತ್ತು ಬರುತ್ತದೆಯೆಂದು ಟೀಕಿಸತೊಡಗಿದ್ದರು.[೬]

ಇದರಿಂದಾಗಿ ರಾಯರ ವಿರುದ್ಧ ಇನ್ನಷ್ಟು ಪಿತೂರಿ ಚಟುವಟಿಕೆಗಳು ಹೆಚ್ಚಾದವು. ಇವರು ಭೇಟಿ ನೀಡಲು ಒಪ್ಪಿರುತ್ತಿದ್ದ ಊರುಗಳಿಗೆ ಮೊದಲೇ ಹೋಗುತ್ತಿದ್ದ ಪಿತೂರಿಗಾರರು, ರಾಯರು ಬ್ರಾಹ್ಮಣ ಜಾತಿವಾದಿಗಳೆಂದೂ, ವೀರಶೈವ ಧರ್ಮ, ವಚನ, ಸಾಹಿತ್ಯದ ವಿರೋಧಿಗಳೆಂದು ಹಬ್ಬಿಸಿ ವೀರಶೈವರಲ್ಲಿ ದ್ವೇಷಭಾವನೆಗಳನ್ನು ಮೂಡಿಸುತ್ತಿದ್ದುದು ಉಂಟು. ಇದರ ಪರಿಣಾಮವೆ ಗದಗಿನಲ್ಲಿ ಆದ ಅಹಿತಕರ ಘಟನೆ. ಎಲ್ಲೆಡೆಯ ಆಹ್ವಾನಗಳಂತೆ ಗದಗಿನಿಂದಲೂ ಸಮ್ಮೇಳನಾಧ್ಯಕ್ಷರಿಗೆ ಆಹ್ವಾನ ಬಂದಿತ್ತು. ಅದರಂತೆ ಗದಗಿನಲ್ಲಿ ಭಾಷಣ ಮಾಡುತ್ತಿದ್ದಾಗ ಕೆಲವು ಕನ್ನಡ ದುರಭಿಮಾನಿಗಳು, ಸಂಕುಚಿತರು ಇವರ ಮೇಲೆ ಕಲ್ಲುಗಳನ್ನು ತೂರಿ ಅವಮಾನಪಡಿಸಿದರು. ಸಭೆಯ ಮಧ್ಯೆ ಪ್ರವೇಶಿಸಿದ ತರೀಕೆರೆಯ ಶಿವಲಿಂಗಯ್ಯ ಅವರು ಅ.ನ.ಕೃಷ್ಣರಾಯರ ವಚನ ಸಾಹಿತ್ಯದ ಅಭಿಮಾನ, ಕೃಷಿ ಇತ್ಯಾದಿಗಳನ್ನು ವಿವರಿಸಿ ಪೋಲೀಸರ ಸಹಕಾರದಿಂದ ರಕ್ಷಣೆ ನೀಡಿ ಬೆಂಗಳೂರಿಗೆ ಕರೆತಂದರು. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಮಡಿವಾಳ ಮಾಚಯ್ಯ ಮೊದಲಾದವರ ವಚನ ಸಾಹಿತ್ಯದ ಕೊಡುಗೆ ಕನ್ನಡ ಸಾಹಿತ್ಯಕ್ಕೆ ತನ್ನತನವನ್ನು ತಂದುಕೊಟ್ಟಿದೆ ಎಂದು ಸಾರುತ್ತಿದ್ದ ಅ.ನ.ಕೃ ಅವರಿಗೆ ಈ ಅವಮಾನವನ್ನು ಸಹಿಸಿಕೊಳ್ಳುವುದು ಕಷ್ಟವೆನಿಸಿತ್ತು. ಆದ್ದರಿಂದಲೆ ಈ ಘಟನೆಯ ನಂತರ ಅವರು ತಮ್ಮ ಶ್ರೀಮತಿ (ಅನ್ನಪೂರ್ಣ) ಅವರ ಬಳಿ, "ನಿನ್ನ ಮಾಂಗಲ್ಯ ಚೆನ್ನಾಗಿತ್ತು, ನಾನು ಉಳಿದು ಬಂದೆ......" ಎಂದೆಲ್ಲಾ ಮಾತನಾಡಿ 'ಕನ್ನಡಮ್ಮನ ಸೇವೆ'ಗೆ ಎದೆಗುಂದದೆ ಮುನ್ನಡೆದಿದ್ದರು. ಅವರಿಗೆ ಸಮ್ಮೇಳನಾಧ್ಯಕ್ಷತೆ ಹೂವಿನ ಸುಪ್ಪತ್ತಿಗೆ ಆಗಿರಲಿಲ್ಲ. ಬದಲಾಗಿ 'ಮುಳ್ಳಿನ ಕಿರೀಟ' ಆಗಿತ್ತು ಎಂಬುದು ಅವರ ಅಭಿಪ್ರಾಯ.[೭] ಅಂದು ಕನ್ನಡಿಗರ ಬವಣೆಗಳಿಗೆ ಚಳವಳಿ ಹೂಡಲು, ತಮ್ಮ ಜವಾಬ್ದಾರಿಗಳನ್ನು ನಿಭಾಯಿಸಲು ಅ.ನ.ಕೃ ಮಾನಸಿಕವಾಗಿ ಸಿದ್ಧರಿದ್ದರು. ಆದರೆ ಅವರಿಗೆ ಒಂದು ಸಂಘಟಿತ ಗುಂಪು ಬೇಕಿತ್ತು. ಆ ಕೊರತೆಯನ್ನು ನೀಗಿಸಲು ಮುಂದೆ ಬಂದದ್ದೇ 'ಕನ್ನಡ ಯುವಜನ ಸಭಾ'.

ಮಣಿಪಾಲದಲ್ಲಿ ಸಾಹಿತ್ಯ ಸಮ್ಮೇಳನವು ೧೯೬೦ರ ಡಿಸೆಂಬರಿನಲ್ಲಿ ವ್ಯವಸ್ಥಿತವಾಗಿ ನಡೆಯಿತು. ಅ.ನ.ಕೃ ಅವರು ತಮ್ಮ ಭಾಷಣದಲ್ಲಿ ಕನ್ನಡ ಭಾಷೆ, ಜನ ಹಾಗೂ ನಾಡನ್ನು ಕುರಿತು ಮಾತನಾಡಿದರು. ಕನ್ನಡಿಗರ ಸಮಕಾಲೀನ ಸಮಸ್ಯೆಗಳ ನಿವಾರಣೆ ಕುರಿತಂತೆ ಹೆಚ್ಚು ಒತ್ತು ಕೊಟ್ಟು ಮಾತನಾಡಿದ್ದು ವಿಶೇಷ. ಅಲ್ಲದೆ ಅದರಲ್ಲೂ ಕನ್ನಡ ಚಳವಳಿಗೆ ಬೇಕಾದ 'ಕನ್ನಡ ಘಂಟೆ'ರ ಅವಶ್ಯಕತೆಯನ್ನು ಕುರಿತು ಮಾತನಾಡಿದ್ದು ಅಲ್ಲಿದ್ದ 'ಕನ್ನಡ ಯುವಜನ ಸಭಾ'ದ ಯುವಕರಿಗೆ ಹುರುಪು ತಂದಿತು. ಸೈದ್ಧಾಂತಿಕವಾಗಿ ಕನ್ನಡ ಚಳವಳಿಯ ಅವಶ್ಯಕತೆಯನ್ನು ಅರಿತಿದ್ದ 'ಯುವಜನ ಸಭಾ'ದ ಕೋಣಂದೂರು ಲಿಂಗಪ್ಪ ಮತ್ತು ಸ್ನೇಹಿತರು ಅದನ್ನು ಕಾರ್ಯರೂಪಕ್ಕೆ ತರಲು ಸಮ್ಮೇಳನದಲ್ಲಿಯೇ ನಿರ್ಧರಿಸಿದರು. ಅಂದರೆ

ಅಧ್ಯಕ್ಷರಿಗೆ ನೀಡಿದ್ದ ಕೋಣೆಯಲ್ಲಿಯೇ 'ಕನ್ನಡ ಯುವಜನ ಸಭೆ'ಯನ್ನು ವರಕವಿ ಬೇಂದ್ರೆ ಅವರಿಂದ ವಿಧ್ಯುಕ್ತವಾಗಿ ಉದ್ಘಾಟಿಸಿದ್ದು (೨೮-೧೨-೧೯೬೦) ದಾಖಲಾರ್ಹ ಘಟನೆ. ಈ ಸಂದರ್ಭದಲ್ಲಿ ನಾಡಿನಾದ್ಯಂತ ಕನ್ನಡಿಗರನ್ನು ಹುರಿದುಂಬಿಸುವ ಕಾರ್ಯಕ್ರಮಗಳ ಬಗ್ಗೆ ಯೋಜಿಸಲಾಯಿತು. ಸಮ್ಮೇಳನವು ಮುಗಿದ ಮೇಲೆ ಲಿಂಗಪ್ಪ ಮತ್ತು ಸಂಗಡಿಗರು (ಶಾಮಣ್ಣ, ಶ್ರೀನಿವಾಸ ಕೆ. ಎಚ್., ಕೆ. ಜಿ. ಮಹೇಶ್ವರಪ್ಪ, ಬಂದಗದ್ದೆ ರಮೇಶ್ ಮೊದಲಾದವರು) ಅ.ನ.ಕೃ ಅವರನ್ನು ಬೆಂಗಳೂರಿಗೆ ಕರೆತರುವುದಕ್ಕೆ ಮೊದಲು ಅಲ್ಲಲ್ಲಿ ಸಭೆಗಳನ್ನು ನಡೆಸಿ ಕನ್ನಡಿಗರು ಸಂಘಟಿತರಾಗುವಂತೆ ಕರೆ ಕೊಡಿಸಿದರು. ಈ ಹಿನ್ನೆಲೆಯಲ್ಲಿ ಆಗುಂಬೆ, ತೀರ್ಥಹಳ್ಳಿ, ಕೋಣಂದೂರು, ಉತ್ತಮಪೇಟೆ, ಶಿವಮೊಗ್ಗ ಮೊದಲಾದೆಡೆಗಳಲ್ಲಿ ಭಾಷಣಗಳನ್ನು ವ್ಯವಸ್ಥೆ ಮಾಡಲಾಗಿತ್ತು.

### ೪.೨.೪ ಬೆಂಗಳೂರಿನಲ್ಲಿ ಚಳವಳಿಯ ಆರಂಭ

ಅ.ನ.ಕೃ ಅವರನ್ನು ಬೆಂಗಳೂರಿಗೆ ಕರೆತಂದ ಮೇಲೆ 'ಯುವಜನ ಸಭಾ'ದವರು ಅವರ ಮನೆಯನ್ನೇ ಕನ್ನಡ ಚಳವಳಿಯ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡರು. ಬೆಂಗಳೂರಿನಲ್ಲಿನ ಕನ್ನಡೇತರರ ದಬ್ಬಾಳಿಕೆ, ಹಾವಳಿಗಳನ್ನು ಕುರಿತಂತೆ ಕನ್ನಡಿಗರು ಸಂಘಟಿತರಾಗುವುದು ಅನಿವಾರ್ಯ ಆಗಿತ್ತು. ಹೀಗೆ ಸಂಘಟಿಸುವ ಹೊಣೆಗಾರಿಕೆಯನ್ನು ಹೊತ್ತವರು ಕೋಣಂದೂರು ಲಿಂಗಪ್ಪನವರೆ.

ಅ.ನ.ಕೃ ಅವರನ್ನು ಒಳಗೊಂಡಂತೆ ವೀರಕೇಸರಿ ಸೀತಾರಾಮಶಾಸ್ತ್ರಿ, ಮ. ರಾಮಮೂರ್ತಿ, ನಾಡಿಗೇರ ಕೃಷ್ಣರಾವ್, ಮೈ. ಸು. ಶೇಷಗಿರಿರಾವ್, ಮೈ. ಸು. ನಟರಾಜನ್, ಕರ್ಲಮಂಗಲಂ ಶ್ರೀಕಂಠಯ್ಯ ಮೊದಲಾದವರನ್ನು ಕಂಡ ಲಿಂಗಪ್ಪ ಕನ್ನಡ ಚಳವಳಿಯ ಸಿದ್ಧತೆಗಳ ಬಗ್ಗೆ ವಿವರಿಸಿ, ಸಂಘಟಿಸಿದರು. ಬೆಂಗಳೂರಿನ ಕನ್ನಡ ಸ್ಥಿತಿಗತಿಗಳನ್ನು ಕುರಿತಂತೆ ಚರ್ಚಿಸಲು ಒಂದು ವಿಚಾರ ಸಂಕಿರಣವನ್ನು ನಡೆಸುವ ಜವಾಬ್ದಾರಿ ಹೊತ್ತದ್ದು 'ಸಾಹಿತ್ಯ ಕುಟೀರ' ಸಂಸ್ಥೆ. ಈ ಸಂಸ್ಥೆಯು ಎಂ. ವಿ. ಸುಬ್ಬರಾಯ (ಸೈಕಲ್ ಸುಬ್ಬರಾವ್)ರ ನೇತೃತ್ವದಲ್ಲಿ ಸಾಹಿತ್ಯಕ ಚಟುವಟಿಕೆಗಳನ್ನು ನೆರವೇರಿಸುತ್ತಿತ್ತು. ಇದರಡಿಯಲ್ಲಿ ನಡೆದ ವಿಚಾರ ಸಂಕಿರಣಕ್ಕೆ ಅ.ನ.ಕೃ ಅವರೆ ಅಧ್ಯಕ್ಷರು. ಮಂಗಳವೇಡೆ ಶ್ರೀನಿವಾಸರಾವ್, ಮ. ರಾಮಮೂರ್ತಿ, ನಾ. ಕೃ. ಸತ್ಯನಾರಾಯಣ, ಕೋಣಂದೂರು ಲಿಂಗಪ್ಪ ಮೊದಲಾದವರು ಕನ್ನಡ ಚಳವಳಿಯನ್ನು ಬೃಹತ್ ಪ್ರಮಾಣದಲ್ಲಿ ಹೂಡುವುದರ ಬಗೆಗೆ (ಬೆಂಗಳೂರಿನಲ್ಲಿ) ಚರ್ಚಿಸಿದ್ದು ಉಂಟು. ಆ ಮೂಲಕ ಕನ್ನಡಿಗರನ್ನು ಎಚ್ಚರಿಸುವುದು ಇವರೆಲ್ಲರ ಆಶಯವಾಗಿತ್ತು. ಆದರೆ ೧೯೬೧ರ ಮಾರ್ಚ್-ಏಪ್ರಿಲ್ ವೇಳೆಗಾಗಲೇ ಪರೀಕ್ಷೆಗಳು ಬಂದದ್ದರಿಂದ ಲಿಂಗಪ್ಪ ಮೊದಲಾದವರು ಅಂತಿಮ ಬಿ. ಎ. ಪರೀಕ್ಷೆಗಳನ್ನು ಬರೆಯಲು ಮೈಸೂರಿಗೆ ತೆರಳಿದರು.

ಪರೀಕ್ಷೆಗಳು ಮುಗಿದ ಮೇಲೆ ಮತ್ತೆ ಬೆಂಗಳೂರು ಸೇರಿದ ಲಿಂಗಪ್ಪನವರು ಕನ್ನಡ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಂಡರು. ಲಾ ಕಾಲೇಜಿಗೆ (ಮೈಸೂರು ಬ್ಯಾಂಕ್ ಬಳಿ) ಸೇರಿದ ಇವರು ಕಾಲೇಜಿನ 'ಕನ್ನಡ ಸಂಘ'ಕ್ಕೆ ಕಾರ್ಯದರ್ಶಿಯಾಗಿ ಆಯ್ಕೆ ಆಗಿದ್ದು ಇನ್ನಷ್ಟು ಹುರುಪು ತಂದಿತ್ತು. ಈ ಅವಧಿಯಲ್ಲಿಯೆ (ಕನ್ನಡ ಕುಲಪುರೋಹಿತರು ಎನಿಸಿದ್ದ) ಆಲೂರ ವೆಂಕಟರಾಯರು ಧಾರವಾಡದಿಂದ ಬೆಂಗಳೂರಿಗೆ ಬಂದದ್ದು. ಆಲೂರರು ಏಕೀಕರಣದ

ನಂತರ ಬೆಂಗಳೂರಿನ ಕನ್ನಡದ ಸ್ಥಿತಿಗತಿಗಳನ್ನು ಕಂಡು ಮತ್ತಷ್ಟು ಪ್ರತಿಭಟಿಸಿದರು. ಅವರು ಕನ್ನಡೇತರರ ಆಕ್ರಮಣಕಾರಿ ಪ್ರವೃತ್ತಿಗಳನ್ನು ಹತ್ತಿಕ್ಕಲು ಕನ್ನಡಿಗರು ಸಂಘಟಿತರಾಗುವುದು ಒಂದೇ ಹಾದಿ ಎಂದರು. ಅಲ್ಲದೆ ಯುವಕರನ್ನು ಸಂಘಟಿತರಾಗಲು ಕೇಳಿಕೊಂಡರು. ಲಿಂಗಪ್ಪ ಮತ್ತು ಸಂಗಡಿಗರು ಆಲೂರರ ಕರೆಗೆ ಮನ್ನಣೆ ನೀಡಿ ನವೆಂಬರ್ ತಿಂಗಳ ರಾಜ್ಯೋತ್ಸವವನ್ನು ಅಪೂರ್ವಿಯಾಗಿ ನಡೆಸಲು ಯೋಜಿಸಿದ್ದುಂಟು. 'ಕನ್ನಡ ಯುವಜನ ಸಭಾ'ದ ಮೊಟ್ಟ ಮೊದಲ ರಾಜ್ಯೋತ್ಸವ ಇದಾಗಿತ್ತು. ಅದರಂತೆ ೧೯೬೧ರ ನವೆಂಬರ್ ೧ನ್ನು ಚಿಕ್ಕ ಲಾಲ್‌ಭಾಗಿನಲ್ಲಿ ಕನ್ನಡ ಬಾವುಟ (ಭುವನೇಶ್ವರಿ ಬಾವುಟ)ವನ್ನು ಹಾರಿಸಲಾಯಿತು. ಲಿಂಗಪ್ಪನವರ ಹಿಂದಿನ ಕನಸಿನಂತೆ ಬೆಂಗಳೂರಿನ ಈ ರಾಜ್ಯೋತ್ಸವದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸೇರಿದ್ದ ಕನ್ನಡಿಗರಲ್ಲದೆ ಸಾಹಿತಿ-ಕಲಾವಿದರು, ಸಂಘ-ಸಂಸ್ಥೆಗಳು, ಚಳವಳಿಕಾರರು ಇದ್ದರು. ಕನ್ನಡಿಗರ ಸ್ಥಿಗತಿಗಳನ್ನು ವಿವರಿಸುವ, ಸಂಘಟಿತರಾಗುವಂತೆ ಕೇಳಿಕೊಳ್ಳಲಾದ ಕರಪತ್ರಗಳನ್ನು ಈ ಸಂದರ್ಭದಲ್ಲಿ ಹಂಚಲಾಯಿತು.

ಬೆಂಗಳೂರಿನ ಕನ್ನಡಿಗರಲ್ಲಿ ಜಾಗೃತಿ ಮೂಡಿಸುವ ಸಲುವಾಗಿ ೨೩-೧೧-೧೯೬೧ ರಂದು 'ಕನ್ನಡ ದಿನ'ವನ್ನಾಗಿ ಆಚರಿಸಲು ಕರೆಕೊಟ್ಟದ್ದು ಗಮನಾರ್ಹವಾದ ಸಂಗತಿ. ಕನ್ನಡವನ್ನು ಉಳಿಸಿ, ಬೆಳಸದಿದ್ದರೆ ಕನ್ನಡ ನಾಡು ನಾಮಾವಶೇಷವಾಗುತ್ತದೆ ಎಂದು ಈ ಸಂದರ್ಭದಲ್ಲಿ ಎಚ್ಚರಿಸಲಾಯಿತು. ಇದಾದ ಮೇಲೆ ಯುವಜನ ಸಭಾದವರು ತಮ್ಮ ಮೊದಲ ಅಧಿವೇಶನವನ್ನು (೧೯೬೧ರ ಅಂತ್ಯದಲ್ಲಿ) ದಾವಣಗೆರೆಯಲ್ಲಿ ನಡೆಸಿ, ಅನೇಕ ಗೊತ್ತುವಳಿಗಳನ್ನು ಅಂಗೀಕರಿಸಿದರು. ಆದರೆ ಇಂಥ ಸಣ್ಣ-ಪುಟ್ಟ ಸಭೆ, ಸಮಾರಂಭ, ಅಧಿವೇಶನಗಳು ಬೆಂಗಳೂರಿನ ಕನ್ನಡಿಗರನ್ನು ಎಚ್ಚರಿಸುವಲ್ಲಿ ಅಂಥ ಪ್ರಗತಿಯನ್ನೇನು ಸಾಧಿಸಿದಂತೆ ಮಾಡಿರಲಿಲ್ಲ. ಹೀಗಾಗಿ ಒಂದು ದೊಡ್ಡ ಬಹಿರಂಗ ಸಮ್ಮೇಳನವನ್ನೇ ಬೆಂಗಳೂರಿನಲ್ಲಿ ಮಾಡುವುದು ಅನಿವಾರ್ಯವೆಂದು 'ಸಭಾ'ದವರು ಅರಿತುಕೊಂಡರು. ಕನ್ನಡ ಚಳವಳಿಯನ್ನು ಹುಟ್ಟು ಹಾಕಿ ತೀವ್ರಗೊಳಿಸುವುದು ಈ ಸಮ್ಮೇಳನದ ಆಶಯವಾಗಿತ್ತು. ಅದರ ಪರಿಣಾಮವೆ ೪-೨-೧೯೬೨ರಂದು ನಡೆದ ಕನ್ನಡಿಗರ ಮೊಟ್ಟ ಮೊದಲ ಸಮಾವೇಶ.

### ೪.೨.೫ 'ಕನ್ನಡ ಯುವಜನ ಸಭಾ'ದ ಮೊದಲ ಅಧಿವೇಶನ

ಆಲೂರ ವೆಂಕಟರಾಯರಂಥ ಹಿರಿಯರ ಒತ್ತಾಸೆಯ ಮೇರೆಗೆ ರಾಜಧಾನಿ ಬೆಂಗಳೂರಿನಲ್ಲಿ ದೊಡ್ಡ ಸಮ್ಮೇಳನವನ್ನು ನಡೆಸುವುದು ಅನಿವಾರ್ಯ ಆಯಿತು. ಹೀಗಾಗಿ ೪-೨-೧೯೬೨ರಂದು ನಾಡಿನ ಎಲ್ಲೆಡೆಯ ಯುವಜನ ಸಭಾದ ಶಾಖೆಗಳವರು ಬೆಂಗಳೂರಿನಲ್ಲಿನ ಸಮಾವೇಶಕ್ಕೆ ಹಾಜರಾಗಲು ಪತ್ರಗಳು ರವಾನೆ ಆದವು. ಜೊತೆಗೆ ಕನ್ನಡದ ಹಿರಿಯ ಸಾಹಿತಿ-ಕಲಾವಿದರು, ಕನ್ನಡಾಸಕ್ತರು ಈ ಸಭೆಗೆ ಹಾಜರಾದರು. ಸಮಾವೇಶವು ನಗರದ ಕೆಂಪೇಗೌಡ ರಸ್ತೆಯ 'ಮೈಸೂರು ವಾಣಿಜ್ಯ ಭವನ' (Mysore Chamber of Commerce)ದಲ್ಲಿ ಬೆಳಗ್ಗೆ 'ಕನ್ನಡ ಬಾವುಟ' (ಕನ್ನಡ ಭುವನೇಶ್ವರಿ ಬಾವುಟ)ವನ್ನು ಹಾರಿಸುವುದರೊಂದಿಗೆ ಉದ್ಘಾಟನೆಗೊಂಡಿತು. ಕನ್ನಡದ ಚಳವಳಿ ಚರಿತ್ರೆಯಲ್ಲಿ ಈ ಸಮ್ಮೇಳನವೆ ಮೊಟ್ಟ ಮೊದಲ ಬಹಿರಂಗವಾದ ಸಾರ್ವಜನಿಕ ಕನ್ನಡ ಸಮ್ಮೇಳನವಾಗಿದೆ. ಇದರ ಅಧ್ಯಕ್ಷತೆ ನಾಟಕಕಾರ ಶ್ರೀರಂಗರದು. ಉದ್ಘಾಟಕರು ಮಾಜಿ

ಮುಖ್ಯಮಂತ್ರಿಗಳಾಗಿದ್ದ ಕೆ. ಹನುಮಂತಯ್ಯನವರು. 'ಕನ್ನಡ ಯುವಜನ ಸಭಾ'ವು ಈ ಸಮ್ಮೇಳನಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡ ಸಂಘ-ಸಂಸ್ಥೆಗಳನ್ನು ಹಾಗೂ ವಿಶೇಷವಾಗಿ ಯುವಕರನ್ನು ಸಂಘಟಿಸಿತ್ತು.

'ಸಭಾ'ದ ಅಧ್ಯಕ್ಷರಾಗಿದ್ದ ಅ.ನ.ಕೃ ಅವರು ಈ ಸಮ್ಮೇಳನದ ಸ್ವಾಗತ ಭಾಷಣ ಮಾಡಿ ಕನ್ನಡಿಗರ ಸ್ಥಿತಿಗತಿಗಳ ಬಗ್ಗೆ ಮನವರಿಕೆ ಮಾಡಿಕೊಟ್ಟರು. ಕಾರ್ಯದರ್ಶಿಗಳಾಗಿದ್ದ ಕೋಣಂದೂರು ಲಿಂಗಪ್ಪನವರು ಮಾತನಾಡಿ ಕನ್ನಡಿಗರು "ಕನ್ನಡದ ಹಿತರಕ್ಷಣೆಗೆ ಪ್ರಾಮಾಣಿಕವಾಗಿ ದುಡಿಯುವುದೇ ಗುರಿ"ಯನ್ನಾಗಿ ಇಟ್ಟುಕೊಳ್ಳಬೇಕು ಎಂದು ಸ್ಪಷ್ಟಪಡಿಸಿದ್ದು ಯುವಕರಲ್ಲಿ ಪ್ರೇರಣೆ ನೀಡಿತ್ತು. ಈ ಸಮ್ಮೇಳನವು ಮುಖ್ಯ ಅನ್ನಿಸಿಕೊಳ್ಳುವುದು ಇದು ಹುಟ್ಟುಹಾಕಿದ 'ಕನ್ನಡ ಯುವಜನ' ಎಂಬ ವಾರ ಪತ್ರಿಕೆಯಿಂದ. ಚಳವಳಿ ಚರಿತ್ರೆಯಲ್ಲಿ ಈ ಪತ್ರಿಕೆಯು ಮಹತ್ವದ್ದು. ಖಾದ್ರಿ ಶಾಮಣ್ಣ ಅವರಿಂದ ಬಿಡುಗಡೆಗೊಂಡ ಈ ಪತ್ರಿಕೆಯ ಸಂಪಾದಕರು ಅಂದು ಪ್ರಮುಖ ಚಳವಳಿಗಾರರೆನ್ನಿಸಿದ್ದ ಮ. ರಾಮಮೂರ್ತಿ ಅವರು. ಪತ್ರಕರ್ತ ಶಾಮಣ್ಣ ಅವರು ಕನ್ನಡಿಗರಲ್ಲಿ 'ಕೆಚ್ಚು' ಎಂಬುದು ಇಲ್ಲ ಎಂದು ನುಡಿದದ್ದು ಕನ್ನಡ ಚಳವಳಿಯ ಅನಿವಾರ್ಯತೆಯನ್ನು ಹೇಳುವಂತಿತ್ತು. ಕನ್ನಡಿಗರ ಸಮಸ್ಯೆಗಳನ್ನು ಗುರುತಿಸಿ ಬಗೆಹರಿಸಿಕೊಳ್ಳಲು, ಕನ್ನಡಿಗರನ್ನು ಸಂಘಟಿಸಲು ಚಳವಳಿಗಾಗಿಯೇ ಹುಟ್ಟಿದ ಮೊದಲ ಪತ್ರಿಕೆಯೆ ಈ 'ಕನ್ನಡ ಯುವಜನ' ಪತ್ರಿಕೆ. ಕನ್ನಡ ಚಳವಳಿ ಚರಿತ್ರೆಯಲ್ಲಿ ಈ ಸಮ್ಮೇಳನವು ಪ್ರಧಾನವಾದುದು ಎಂದು ನೆಲೆಗೊಳ್ಳುವುದು ಇದು ತೆಗೆದುಕೊಂಡು ಅಂಗೀಕರಿಸಿದ ಅಂದಿನ ನಿರ್ಣಯಗಳಿಂದ. ಆ ಹೊತ್ತಿನ ಕನ್ನಡ- ಕನ್ನಡಿಗ-ಕರ್ನಾಟಕಗಳಿಗೆ ಸಂಬಂಧಿಸಿದ ಸಮಸ್ಯೆಗಳ ಪರಿಹಾರಕ್ಕೆ ಅನೇಕ ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು. ಅವು ಈ ಹೊತ್ತಿಗೂ ಪ್ರಸ್ತುತ ಆಗುವಷ್ಟರ ಮಟ್ಟಿಗೆ ಮಹತ್ವವನ್ನು ಪಡೆದಿವೆ. ಅವುಗಳೆಂದರೆ -

೧. ಕನ್ನಡ ನಾಡಿನ ಸಮಸ್ಯೆಗಳ ಪರಿಹಾರಕ್ಕಾಗಿ ಶ್ರಮಿಸುವುದಾಗಿ ವಚನವಿತ್ತವರಿಗೆ ಮಾತ್ರ ಚುನಾವಣೆಗಳಲ್ಲಿ ಮತ ನೀಡುವುದು. ಅಂದರೆ "ಕನ್ನಡದ ರಕ್ಷಕರಿಗೆ ಮಾತ್ರ ಓಟು" ಎಂಬ ನಿರ್ಣಯ.

೨. "ವಿಲೀನಗೊಳಿಸುವುದಾದರೆ ಗೋವಾ ಕರ್ನಾಟಕಕ್ಕೆ ಸೇರಲಿ". ಹಾಸನ-ಮಂಗಳೂರು ರೈಲ್ವೆ ಕೆಲಸ ಕೂಡಲೇ ಆರಂಭಿಸುವಂತೆ ಒತ್ತಾಯಿಸುವ ನಿರ್ಣಯ.

೩. ಕನ್ನಡ ಟೈಪ್‌ರೈಟರ್‌ನ ಕಾಪಿರೈಟನ್ನು (ಅನಂತ ಕೀ ಬೋರ್ಡ್) ಹೊಂದಿರುವ ಹಾಲ್ಡಾ ಕಂಪನಿ ಅವರಿಂದ ಸರ್ಕಾರವೆ ಪಡೆಯುವುದು.

೪. ರಾಷ್ಟ್ರ ಪ್ರಶಸ್ತಿಗಳನ್ನು ನಾಡಿನ ಸಾಹಿತಿ-ಕಲಾವಿದರಿಗೂ ನೀಡುವುದು. ವಿದ್ಯಾರಣ್ಯ, ಕೃಷ್ಣದೇವರಾಯ, ಬಸವೇಶ್ವರ, ವೀಣೆ ಶೇಷಣ್ಣ, ಬಿಡಾರಂ ಕೃಷ್ಣಪ್ಪ, ಎ. ವಿ. ವರದಾಚಾರ್ಯ, ಶಾಂತಕವಿ ಮೊದಲಾದವರ ಸ್ಮಾರಕ ಅಂಚೆ-ಚೀಟಿಗಳನ್ನು ಪ್ರಕಟಿಸುವುದು.

೫. ಅಚ್ಚ ಕನ್ನಡ ಪ್ರದೇಶಗಳಾದ ಕಾಸರಗೋಡು, ತಾಳವಾಡಿ, ಹೊಸೂರು, ಮಡಕಶಿರ, ಆದೋನಿ, ರಾಯದುರ್ಗ, ಜತ್ತ, ಅಕ್ಕಲಕೋಟೆ, ಕೊಲ್ಹಾಪುರ ಮುಂತಾದ ಪ್ರದೇಶಗಳನ್ನು ಕರ್ನಾಟಕಕ್ಕೆ ಸೇರಿಸಲು ನಿಧಾನಗತಿ ತೋರಿಸುತ್ತಿರುವ ಸರ್ಕಾರದ

ಧೋರಣೆ ಬಗ್ಗೆ ಖಂಡನೆ. ಇದಕ್ಕಾಗಿ ಕನ್ನಡ ಯುವಜನರ ಬೆಂಬಲ ಪಡೆಯಲು ಸರ್ಕಾರಕ್ಕೆ ಕರೆ.

೬. ರಾಜ್ಯದ ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಶಿಕ್ಷಣ ಮಾಧ್ಯಮಕ್ಕೆ ಒತ್ತಾಯ.

೭. ಆಕಾಶವಾಣಿಯ ದಕ್ಷಿಣ ವಿಭಾಗದ ಕಲಾವಿದರನ್ನು ಆರಿಸುವ ಆಯ್ಕೆ ಸಮಿತಿಯಲ್ಲಿ ಕನ್ನಡಿಗರಿಗೆ ಉಚಿತ ಪ್ರಮಾಣದ ಪ್ರಾತಿನಿಧ್ಯವಿಲ್ಲದಿರುವುದನ್ನು ಸರಿಪಡಿಸಿ, ಕನ್ನಡ ಕಲಾವಿದರಿಗೆ ಅವಕಾಶ ನೀಡುವುದು.

೮. ನಗರದ ರಾಮ ಸೇವಾ ಮಂಡಲಿಗಳು, ಗಣೇಶೋತ್ಸವ ಸಮಿತಿಗಳು ಏರ್ಪಡಿಸುವ ಸಂಗೀತ ಕಛೇರಿಗಳಲ್ಲಿ ಕರ್ನಾಟಕದ ಸಂಗೀತಗಾರರಿಗೆ ಸಾಕಷ್ಟು ಪ್ರಾತಿನಿಧ್ಯ ದೊರೆಯುತ್ತಿಲ್ಲ ಎಂಬುದರ ಬಗ್ಗೆ ಅಸಮಾಧಾನ ವ್ಯಕ್ತಪಡಿಸುವುದು.

೯. ಕರ್ನಾಟಕದ ಆರ್ಥಿಕ ಪುರೋಭಿವೃದ್ಧಿಗೆ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಹಾಸನ-ಮಂಗಳೂರು, ಸತ್ಯಮಂಗಲ-ಚಾಮರಾಜನಗರ ರೈಲ್ವೆ ನಿರ್ಮಾಣಕ್ಕೆ ಒತ್ತಾಯ. ಮಂಗಳೂರು ರೇವಿನ ವಿಸ್ತರಣ ಕಾರ್ಯದಲ್ಲಿ ಕೇಂದ್ರ ಸರ್ಕಾರದ ನಿಧಾನಗತಿ, ಪಕ್ಷಪಾತ ಧೋರಣೆಗಳಿಗಾಗಿ ಖಂಡನೆ.

೧೦. ಕನ್ನಡ ಚಲನಚಿತ್ರಗಳ ಪ್ರದರ್ಶನಕ್ಕೆ ನಗರದಲ್ಲಿ, ಸಕಾಲದಲ್ಲಿ ಮತ್ತು ವ್ಯಾವಹಾರಿಕ ವೆನಿಸಿದ ಬಾಡಿಗೆ ದರಕ್ಕೆ ಥಿಯೇಟರ್‌ಗಳು ದೊರಕುತ್ತಿಲ್ಲವಾದ ಕಾರಣ, ಸರಕಾರದವರು ಪ್ರತಿ ಸಿನಿಮಾ ಮಂದಿರದವರೂ ವರ್ಷಕ್ಕೆ ಇಂತಿಷ್ಟು ಕನ್ನಡ ಚಿತ್ರಗಳನ್ನು ಪ್ರದರ್ಶಿಸಬೇಕೆಂದು ಕಡ್ಡಾಯ ಶಾಸನ ಮಾಡುವಂತೆ ಸರಕಾರವನ್ನು ಒತ್ತಾಯಿಸುವುದು.

೧೧. ಬೇರೆ ಭಾಷೆಯ ಚಲನಚಿತ್ರಗಳನ್ನು ಕನ್ನಡಕ್ಕೆ 'ಡಬ್ಬಿಂಗ್' ಮಾಡುವುದನ್ನು ವಿರೋಧಿಸುವ ನಿರ್ಣಯ.

೧೨. ರಾಜ್ಯವನ್ನು 'ಕರ್ನಾಟಕ' ಎಂದು ಕರೆಯುವ, ಆಡಳಿತ ಭಾಷೆ, ನ್ಯಾಯಾಂಗದ ಭಾಷೆ ಕನ್ನಡ ಮಾಡಲು ಸರ್ಕಾರಕ್ಕೆ ಒತ್ತಾಯಿಸುವುದು.

೧೩. ನಗರ ಕಾರ್ಪೊರೇಷನ್ನಿನಲ್ಲಿ ಕನ್ನಡವನ್ನು ಬಳಸಲು ನಿರ್ಧರಿಸಿರುವುದಕ್ಕೆ ಅಭಿನಂದನಾ ನಿರ್ಣಯ.[೮]

ಇವುಗಳಲ್ಲದೆ ಸಮಕಾಲೀನ ಸಂದರ್ಭದಲ್ಲಿನ ಮುಷ್ಕರ ಹೂಡಿದ್ದ ಆಯುರ್ವೇದ ಕಾಲೇಜ್ ವಿದ್ಯಾರ್ಥಿಗಳ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರವನ್ನು ಒತ್ತಾಯಿಸುವ, ಮೈಸೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದ ಡಿ. ವಿ. ಗುಂಡಪ್ಪ ಅವರನ್ನೂ ಪದ್ಮಶ್ರೀ ಪಡೆದ ಸಿ. ಕೆ. ವೆಂಕಟರಾಮಯ್ಯನವರನ್ನೂ ಅಭಿನಂದಿಸುವ ನಿರ್ಣಯ, ವೆಸ್ಟ್ ಇಂಡೀಸ್‌ನಲ್ಲಿ ಭಾರತದ ಕ್ರಿಕೆಟ್ ತಂಡದಲ್ಲಿದ್ದ ಕನ್ನಡದ ಯುವಕರಾದ ಪ್ರಸನ್ನ, ಜಯಸಿಂಹ, (ಕುಂದರನ್) ಅವರುಗಳನ್ನು ಅಭಿನಂದಿಸುವ ಒಟ್ಟು ೧೫ ನಿರ್ಣಯಗಳನ್ನು ಈ ಸಮ್ಮೇಳನ ಅಂಗೀಕರಿಸಿತ್ತು. ಈ ನಿರ್ಣಯಗಳನ್ನು ಮಂಡಿಸಿದವರು ಹಾಗೂ ಅನುಮೋದಿಸಿದವರು ಅನೇಕರಿದ್ದರು. ಅವರಲ್ಲಿ ಕೆಲವರನ್ನು ಹೆಸರಿಸುವುದಾದರೆ ಭಾರತೀಂದ್ರ ಸ್ವಾಮಿ, ಕೋಣಂದೂರು ಲಿಂಗಪ್ಪ, ಎಂ. ಜಿ. ನರಸಿಂಹಸ್ವಾಮಿ, ಆದ್ಯ ರಂಗಾಚಾರ್ಯ

(ಶ್ರೀರಂಗ), ಎಂ. ವಿ. ಸೂರಾಚಾರಿ, ಕೋ. ಚೆನ್ನಬಸಪ್ಪ, ಶ್ಯಾಮಸುಂದರ್, ರೇವಣ್ಣ ಸಿದ್ದಪ್ಪ, ಎಂ. ವಿ. ಸುಬ್ಬರಾವ್, ಮ. ರಾಮಮೂರ್ತಿ, ಎಂ. ಶ್ರೀಧರ ಮೂರ್ತಿ, ರಂಗಯ್ಯಗೌಡ, ಬಿ. ಎಂ. ಚಂದ್ರನ್, ಕೆ. ವಿ. ಗಂಗರತ್ನಂ, ಅರಸುಕುಮಾರ್ ಮೊದಲಾದವರು ಪ್ರಮುಖರು. ಈ ಸಮ್ಮೇಳನದ ಯಶಸ್ಸಿಗೆ ಆಲೂರ ವೆಂಕಟರಾವ್, ಶಾಂತವೇರಿ ಗೋಪಾಲಗೌಡ, ಬಿ. ಆರ್. ಪಂತುಲು, ಎಸ್. ವಿ. ಕೃಷ್ಣಮೂರ್ತಿರಾವ್ ಹಾಗೂ ನಾಡಿನ ಹಲವು ಕನ್ನಡ ಸಂಘಟನೆಗಳು ಶುಭ ಹಾರೈಸಿದ್ದವು.

### ೪.೨.೬ 'ರಾಮೋತ್ಸವ' ಗಲಾಟೆ ಮತ್ತು ಕನ್ನಡ ಚಳವಳಿ

ಕನ್ನಡ ಯುವಜನ ಸಭಾದ ಸಮ್ಮೇಳನದಲ್ಲಿ ತೆಗೆದುಕೊಳ್ಳಲಾದ ನಿರ್ಣಯದಂತೆ ನಗರದ ರಾಮ ಸೇವಾ ಮಂಡಳಿ, ಗಣೇಶೋತ್ಸವ ಸಮಿತಿಗಳಿಗೆ ಕನ್ನಡ ಕಲಾವಿದರನ್ನೇ ಕರೆಸಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಪತ್ರಗಳ ಮುಖೇನ ಕೇಳಿಕೊಳ್ಳಲಾಗಿತ್ತು. ಏಕೆಂದರೆ ನಾಡು ಏಕೀಕರಣವಾದ ನಂತರವೂ ಬೆಂಗಳೂರು, ಮೈಸೂರು, ಕೋಲಾರ, ಧಾರವಾಡ, ಹುಬ್ಬಳ್ಳಿ, ಮಂಗಳೂರು ಮೊದಲಾದೆಡೆಗಳಲ್ಲಿನ ಗಾಯನ ಸಮಾಜ, ತ್ಯಾಗಬ್ರಹ್ಮ ಮಂಡಳಿ, ಮ್ಯೂಸಿಕ್ ಸರ್ಕಲ್, ಆರ್ಟ್ಸ್ ಸರ್ಕಲ್‌ಗಳಿಗೆ ಕನ್ನಡ ಕಲಾವಿದರನ್ನು ಕರೆಸುತ್ತಿರಲಿಲ್ಲ. ಕನ್ನಡಿಗರ ಮನೆಗಳಲ್ಲಿನ ಉಪನಯನದಿಂದ ಹಿಡಿದು ವಿವಾಹ ಸಮಾರಂಭಗಳವರೆಗೂ ಕನ್ನಡೇತರ (ಅದರಲ್ಲೂ ಮದರಾಸಿನಿಂದ ತಮಿಳು) ಕಲಾವಿದರನ್ನೇ ಕರೆಸಲಾಗುತ್ತಿತ್ತು.[೯] ಕೆಲವು ಸಂಘ-ಸಂಸ್ಥೆಗಳವರು ಅರಿಯಕುಡಿ, ಪಟ್ಟಮ್ಮಾಳ್, ಬಿಸ್ಮಿಲ್ಲಾಖಾನ್, ಹೀರಾಬಾಯಿ ಮೊದಲಾದವರನ್ನೇ ಕರೆಸಿ ಹೆಚ್ಚಿನ ಸಂಭಾವನೆ ಕೊಡುತ್ತಿದ್ದುದು ಉಂಟು. ಸಂಗೀತ, ಕಲೆಗಳಿಗೆ ಭಾಷಿಕ ತಾರತಮ್ಯಗಳನ್ನು ಗುರುತಿಸುವುದು ಸರಿಯಲ್ಲವಾದರೂ ಅಂದು ಕನ್ನಡದ ಕಲಾಪ್ರವೀಣರಿಗೆ ಕನ್ನಡಿಗರೆ ಆದ್ಯತೆ ನೀಡದೆ ಇದ್ದುದು ಅಸಮಧಾನವನ್ನು ಹುಟ್ಟು ಹಾಕಿತ್ತು. ಮೈಸೂರು ಸಂಸ್ಥಾನದ ಮಹಾರಾಜರ ರಾಜಾಶ್ರಯ ತಪ್ಪಿದ ಅನೇಕ ಕಲಾವಿದರು ಬೀದಿಪಾಲಾಗಿದ್ದರು. ನಗರದ ಬಹುಪಾಲು ಕಾರ್ಯಕ್ರಮಗಳು ತಮಿಳು ಕಲಾವಿದರಿಂದ ನಡೆಯುತ್ತಿದ್ದವು. ಆದ್ದರಿಂದಲೆ 'ಯುವಜನ ಸಭಾ'ವು ಕನ್ನಡ ಕಲಾವಿದರಿಗೆ ಆದ್ಯತೆ ನೀಡಲು ಕೋರಿದ್ದೂ. ಆದರೆ ಈ ಮನವಿಗೆ ಚಾಮರಾಜಪೇಟೆಯ 'ರಾಮ ಸೇವಾ ಮಂಡಳಿ' ಮನ್ನಣೆ ನೀಡದೆ ಎಂದಿನಂತೆ ವರ್ತಿಸಿದ್ದು ಕನ್ನಡ ಕಾರ್ಯಕರ್ತರನ್ನು ಕುಪಿತರನ್ನಾಗಿಸಿತ್ತು. ಇದರ ಪರಿಣಾಮವೆ ರಾಮಸೇವಾ ಮಂಡಳಿ ಗಲಾಟೆ.

ಚಾಮರಾಜಪೇಟೆಯ 'ರಾಮಸೇವಾ ಮಂಡಳಿ'ಯ ಕಾರ್ಯಕರ್ತರು ೨೭-೫-೧೯೬೨ ರಂದು ನಡೆದ ರಾಮೋತ್ಸವಕ್ಕೆ ಮದರಾಸಿನಿಂದ ಖ್ಯಾತ ಗಾಯಕಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರನ್ನು ಹಾಡಲು ಕರೆಸಿದ್ದರು. ಇವರನ್ನು ಕರೆಸುವಲ್ಲಿ ಅ.ನ. ರಾಮರಾಯರ ಪಾತ್ರವೂ ಇತ್ತು. ಇವರು ಕನ್ನಡ ಚಳವಳಿ ನಾಯಕರಾಗಿದ್ದ ಅ.ನ.ಕೃ ಅವರ ಅಣ್ಣ. ರಾಮಸೇವಾ ಮಂಡಳಿಯಲ್ಲಿನ ಚುನಾವಣೆಯಲ್ಲಿ ಅ. ನ. ರಾಮರಾಯರು ಆಗ ತಾನೆ ಆಯ್ಕೆ ಆಗಿದ್ದರು. ಇದು ಮಂಡಳಿಯಲ್ಲಿಯೆ ಇದ್ದ ಕೆಲವು ಸದಸ್ಯರಿಗೆ ಅಸಮಧಾನವನ್ನು ತಂದಿತ್ತು. ಈ ವೇಳೆಗಾಗಲೆ ಕನ್ನಡ ಚಳವಳಿಕಾರರು ಕನ್ನಡ ಕಲಾವಿದರನ್ನು ಕರೆಸಲು ಒಪ್ಪದಿದ್ದ 'ಸೇವಾ ಮಂಡಳಿ' ವಿರುದ್ಧ 'ರಾಮೋತ್ಸವ'ದಂದು ಚಳವಳಿ ಹೂಡಿ ಪ್ರತಿಭಟಿಸಲು ಕರೆ ನೀಡಿದ್ದರು. ಆದರೆ ಹಿಂಸೆ ಅಥವ ಅಹಿತರಕವಾಗಿ ನಡೆದುಕೊಳ್ಳುವ ರೀತಿಯಲ್ಲಿ ಅಲ್ಲ. ಬದಲಾಗಿ

ಶಾಂತ ರೀತಿಯಲ್ಲಿ ಪ್ರತಿಭಟಿಸುವುದಾಗಿತ್ತು. ಆದರೆ ಅಸಮಧಾನಚಿತ್ತರಾದ ಕೆಲವು ಕಿಡಿಗೇಡಿಗಳು ಈ ಅವಕಾಶವನ್ನು ಬಳಸಿಕೊಂಡಿದ್ದೇ ಬೇರೆ ರೀತಿಯಲ್ಲಿ. ಅಂದರೆ ಕನ್ನಡ ಕಾರ್ಯಕರ್ತರು ಸುಬ್ಬುಲಕ್ಷ್ಮಿ ಅವರು ನಡೆಸುತ್ತಿದ್ದ ಸಂಗೀತ ಕಛೇರಿಯ ವೇದಿಕೆಯ ಬಳಿಗೆ ಬರುತ್ತಿದ್ದಾಗ ಕೆಲವು ಕಿಡಿಗೇಡಿಗಳು ಇವರೊಂದಿಗೆ ಸೇರಿಕೊಂಡರು. ಅಲ್ಲದೆ ವೇದಿಕೆಯ ಚಪ್ಪರಕ್ಕೆ ಬೆಂಕಿ ಹಚ್ಚಿದ್ದೂ ಉಂಟು. ಕೂಡಲೆ ಅಲ್ಲಿ ದೊಂಬಿ ಶುರುವಾಯಿತು. ಪರಿಸ್ಥಿತಿಯನ್ನು ಹತೋಟಿಗೆ ತರಲಾಗದ ಪೋಲೀಸರು ಅನೇಕ ಕನ್ನಡ ಕಾರ್ಯಕರ್ತರನ್ನು ಥಳಿಸಿ, ಬಂಧಿಸಿ ಮೊಕದ್ದಮೆಗಳನ್ನೂ ಹೂಡಿದರು. ಬಹುಶಃ ಕನ್ನಡ ಚಳವಳಿ ಚರಿತ್ರೆಯಲ್ಲಿ ಮೊಟ್ಟ ಮೊದಲ ಅಹಿತಕರ ಘಟನೆ ಇದೇ ಆಗಿದೆ. ಕನ್ನಡದ ಕಳಕಳಿ ಇದ್ದ ಚಳವಳಿಕಾರರನ್ನು ಕುರಿತು ಮಾರನೆಯ ದಿನದ ತಮಿಳು ಪತ್ರಿಕೆಗಳು ವರದಿಗಳನ್ನು ತಿರುಚಿ ಬರೆದವು.[೧೨] ತಮಿಳು-ಕನ್ನಡ ಭಾಷಿಕ ವಿರೋಧಿ ನೆಲೆಗಳು ಆರಂಭ ಆಗಿದ್ದು ಇಲ್ಲಿಂದಲೇ. ಗಾಂಧಿ ಬಜಾರಿನಲ್ಲಿ ಅ.ನ.ಕೃ ಅವರು ಈ ಬಗ್ಗೆ ಪ್ರತಿಕ್ರಿಯಿಸಿ ಮಾಡಿದ ಭಾಷಣದಿಂದ ಕನ್ನಡಿಗರು ಜಾಗೃತಗೊಂಡರು. ಆದರೆ ಮತ್ತೆ ಕೆಲವು ಪತ್ರಿಕೆಗಳು ಈ ಘಟನೆಯನ್ನು ವಿರುದ್ಧ ವೇದಿಕೆಗಳಲ್ಲಿದ್ದ ಅಣ್ಣ-ತಮ್ಮಂದಿರ (ಅ.ನ. ರಾಮರಾವ್ ಮತ್ತು ಅ.ನ.ಕೃಷ್ಣರಾವ್) ಜಗಳ ಎಂದು ಬರೆದದ್ದೂ ಉಂಟು. ಒಟ್ಟಿನಲ್ಲಿ ಹಿಂಸಾ ಸ್ವರೂಪದ ಈ ಘಟನೆಯಿಂದ ಹಲವು ಕನ್ನಡ ಸಂಘಟನೆಗಳು ಒಗ್ಗೂಡುವಂತೆ ಆಯಿತು. ರಾಜ್ಯದಲ್ಲಿಯಷ್ಟೇ ಅಲ್ಲದೆ ದೇಶದಾದ್ಯಂತ ಕನ್ನಡಿಗರು ಭಾಷಿಕ ತಾರತಮ್ಯ ನೀತಿಯಲ್ಲಿ ಸಂಗೀತ ಕಛೇರಿಯೊಂದನ್ನು ತಡೆದು ನಿಲ್ಲಿಸಿದರು ಎಂಬ ಸುದ್ದಿ ಹರಡಿತು. ಕಿಡಿಗೇಡಿಗಳ ಕೃತ್ಯದಿಂದ ಕನ್ನಡಿಗರು ಭಿನ್ನ ರೀತಿಯಲ್ಲಿ ಅಭಿವ್ಯಕ್ತಗೊಳ್ಳುವಂತೆ ಆಗಿತ್ತು.

### ೪.೨.೭ 'ಕನ್ನಡ ಜಾಗೃತ ಪರಿಷತ್' ಸ್ಥಾಪನೆ

ಕನ್ನಡಿಗರಲ್ಲಿ ನಿರುತ್ಸಾಹ, ನಿರಭಿಮಾನದ ಧೋರಣೆಗಳು ಮೊದಲಿನಿಂದಲೂ ಮನೆ ಮಾಡಿಕೊಂಡಿದ್ದವು. ಇವುಗಳನ್ನು ತೊಡೆದು ಹಾಕಿ ಜಾಗೃತರನ್ನಾಗಿಸುವ ಪ್ರಯತ್ನಗಳು ಮೊದಲಿನಿಂದಲೂ ನಡೆದಿವೆ. ಆದರೆ ರಾಮೋತ್ಸವದ ಸಂದರ್ಭವನ್ನು ಬಳಸಿಕೊಂಡ ಅನೇಕ ಸಂಘ-ಸಂಸ್ಥೆಗಳು ಹಾಗೂ ಕಾರ್ಯಕ್ರಮಗಳು ಈ ಆಶಯಕ್ಕಾಗಿ ಸಂಘಟಿತವಾದವು. ಈ ಸಂದರ್ಭದಲ್ಲಿ ಹುಟ್ಟಿಕೊಂಡ ಪ್ರಮುಖ ಸಂಘಟನೆಯೆ 'ಕನ್ನಡ ಜಾಗೃತ ಪರಿಷತ್'. ಕನ್ನಡದ ಕಳಕಳಿ ಇದ್ದ ಅನೇಕ ಬರಹಗಾರರು ಕೆಲವು ಪತ್ರಿಕೆ-ನಿಯತ ಕಾಲಿಕಗಳಲ್ಲಿ ಈ ಬಗ್ಗೆ ಕನ್ನಡಿಗರನ್ನು ಎಚ್ಚರಿಸುವ ಪ್ರಯತ್ನಗಳನ್ನೂ ಮಾಡಿದ್ದು ಉಂಟು. ಅಷ್ಟೆ ಅಲ್ಲದೆ ಮತ್ತೆ ಕೆಲವರು ಕೆಲವು ಪತ್ರಿಕೆ-ನಿಯತಕಾಲಿಕಗಳನ್ನು ಹೊರಡಿಸಿದ್ದೂ ಇದೆ. ಈ ದಿಸೆಯಲ್ಲಿ 'ಕನ್ನಡ ಜಾಗೃತ ಪರಿಷತ್' ಸಂಘದವರು ಹೊರಡಿಸಿದ 'ಕನ್ನಡ ಜಾಗೃತ ಪತ್ರ' ಎಂಬ ತ್ರೈಮಾಸಿಕ ಪತ್ರಿಕೆ ಮಹತ್ವದ್ದು. ಇದಾದ ಕೆಲವೇ ದಿನಗಳಲ್ಲಿ 'ಧ್ರುವ' ಎಂಬ ಮಾಸಿಕವು ಹೊರಬಂದಿತು. ಈ ಎರಡೂ ಪತ್ರಿಕೆಗಳು ಕನ್ನಡಿಗರಲ್ಲಿ ಕನ್ನಡಾಭಿಮಾನವನ್ನು ತುಂಬಿ ಸಂಘಟಿಸುವ ಆಶಯವನ್ನು ಪ್ರಧಾನವಾಗಿ ಹೊಂದಿದ್ದವು. ಇವೆರಡು ಪತ್ರಿಕೆಗಳ ಪ್ರಕಟಣೆಗೆ ಕಾರಣಕರ್ತರಾದವರು ಐ.ಟಿ.ಐ. ಕಾರ್ಖಾನೆಯ ಕಾರ್ಮಿಕ ಎಂ. ನಾಗರಾಜ್. ಇವರು ಈ ಪತ್ರಿಕೆಗಳನ್ನು ಕನ್ನಡದ ಅಭಿಮಾನ ಮಾತ್ರದಿಂದಲೇ ನಿರಂತರವಾಗಿ ಹೊರಡಿಸಲು ಸಾಧ್ಯ ಆಗಲಿಲ್ಲ. ಇವರನ್ನು ಪ್ರೋತ್ಸಾಹಿಸದ ಕನ್ನಡದ ಓದುಗರು ನಾಗರಾಜ್ ಅವರು

ಸಾಲಗಾರರಾಗುವಂತೆ ಮಾಡಿದರು. ಇವರು ಸಾಲಿಗರ ಕಾಟವನ್ನು ತಾಳಲಾರದೆ ಕೊನೆಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕಾಯಿತು. ಕನ್ನಡಕ್ಕಾಗಿ ಕೈ ಸುಟ್ಟುಕೊಂಡವರ ಉದಾಹರಣೆಗಳು ಈ ಹೊತ್ತಿಗೂ ದೊರೆಯುತ್ತವೆ.

**೪.೨.೮ 'ಕರ್ನಾಟಕ ಸಂಯುಕ್ತರಂಗ'ದ ಅಸ್ತಿತ್ವ**

ಬೆಂಗಳೂರಿನಲ್ಲಿ ಕನ್ನಡಿಗರು ಹಾಗೂ ಕನ್ನಡ ಸಂಘ-ಸಂಸ್ಥೆಗಳು ಸಂಘಟಿತವಾಗುತ್ತಿರುವುದನ್ನು ಕನ್ನಡೇತರರು ಗಮನಿಸದೆ ಇರಲಿಲ್ಲ. ಅದರಲ್ಲೂ ತಮಿಳರು ಈ ವೇಳೆಗಾಗಲೇ 'ದ್ರಾವಿಡ ಮುನ್ನೇತ್ರ ಕಳಗಂ' (ಡಿ.ಎಂ.ಕೆ.) ಮೊದಲಾದ ರಾಜಕೀಯ ಪಕ್ಷಗಳ ಬೆಂಬಲದೊಂದಿಗೆ ಸಂಘಟಿತರಾಗಲು ಆರಂಭಿಸಿದ್ದರು. ತಮಿಳರು ವಾಸಿಸುತ್ತಿದ್ದ ಸ್ಥಳಗಳಲ್ಲಿ (ಕೆಲವು ಕೊಳಚೆ ಪ್ರದೇಶಗಳನ್ನೊಳಗೊಂಡಂತೆ) ಡಿ.ಎಂ.ಕೆ ಪಕ್ಷದ ಕಪ್ಪು ಮತ್ತು ಕೆಂಪು ಬಣ್ಣದ ಬಾವುಟಗಳು ಹಾರಾಡತೊಡಗಿದ್ದವು. ಕನ್ನಡದ ನೆಲದಲ್ಲಿ ತಮಿಳರ ಈ ಪ್ರವೃತ್ತಿಗಳನ್ನು ಕನ್ನಡ ಚಳವಳಿಗಾರರು ಪ್ರತಿಭಟಿಸಲು ಆರಂಭಿಸಿದ್ದೂ ಉಂಟು. ಕನ್ನಡ-ಕನ್ನಡಿಗ-ಕರ್ನಾಟಕಗಳನ್ನು ಪ್ರತಿನಿಧಿಸುವ ಒಂದು ನಿಗದಿತವಾದ 'ಕನ್ನಡ ಬಾವುಟ' ಎಂಬುದು ಇಲ್ಲದೆ ಇದ್ದದ್ದು ಚಳವಳಿಗಾರರನ್ನು ಕಾಡಿತ್ತು. ಕೆಲವೆಡೆ ಕರ್ನಾಟಕದ ಭೂಪಟದ ಬಾವುಟ, ಮತ್ತೆ ಕೆಲವೆಡೆಗಳಲ್ಲಿ ಭುವನೇಶ್ವರಿ ತಾಯಿಯ ಹಾಗೂ ಗಂಡಬೇರುಂಡ ಪಕ್ಷಿಯ ಚಿತ್ರಗಳಿರುವ ಬಾವುಟಗಳನ್ನೂ ಬಳಸುತ್ತಿದ್ದರು. ಬಾವುಟದ ಚಿಂತೆ ಎಲ್ಲ ಕನ್ನಡ ಸಂಘಗಳನ್ನು ಕಾಡದೆ ಇರಲಿಲ್ಲ.

ಕನ್ನಡ ಯುವ ಜನ ಸಭಾದವರು ಹೆಚ್ಚಿನ ಪಾಲು ವಿದ್ಯಾರ್ಥಿಗಳೇ ಆಗಿದ್ದುದರಿಂದ ಕನ್ನಡದ ಎಲ್ಲ ಸಮಸ್ಯೆಗಳನ್ನು ಎಲ್ಲ ಸನ್ನಿವೇಶಗಳಲ್ಲೂ ಹಾಗೂ ಎಲ್ಲ ಸಂದರ್ಭಗಳಲ್ಲಿಯೂ ಸ್ಪಂದಿಸಲು ಸಾಧ್ಯ ಆಗುತ್ತಿರಲಿಲ್ಲ. ಇವರುಗಳಿಗೆ ಪಾಠ-ಪ್ರವಚನ, ಪರೀಕ್ಷೆಗಳಿಂದ ಹೆಚ್ಚಿನ ತೊಡಕು ಉಂಟಾಗುತ್ತಿತ್ತು. 'ಕನ್ನಡ ಯುವಜನ' ಪತ್ರಿಕೆಯ ಸಂಪಾದಕರಾದ ಮ. ರಾಮಮೂರ್ತಿ ಅವರು ಮಾತ್ರ ತಮ್ಮ ಬರವಣಿಗೆ ಮತ್ತು ಚಟುವಟಿಕೆಗಳ ಮೂಲಕ ಕನ್ನಡ ಚಳವಳಿಯನ್ನು ತೀವ್ರವಾಗಿಸುತ್ತಿದ್ದರು ಅಷ್ಟೇ. ಆದರೆ ಕೋಣಂದೂರು ಲಿಂಗಪ್ಪ, ಬಂದಗದ್ದೆ ರಮೇಶ್, ಕೆ. ಜಿ. ಮಹೇಶ್ವರಪ್ಪ, ಕಡಿದಾಳ್ ಶಾಮಣ್ಣ ಮೊದಲಾದವರು ಕನ್ನಡದ ದಿನನಿತ್ಯದ ಸಮಸ್ಯೆಗಳೆಲ್ಲವಕ್ಕೂ ಸ್ಪಂದಿಸಲು ಆಗುತ್ತಿರಲಿಲ್ಲ. ಇದರ ಜೊತೆಗೆ ಕನ್ನಡೇತರರ ಹಾವಳಿಗಳನ್ನು ತಡೆಯಲು ಒಂದು ಪೂರ್ಣ ಪ್ರಮಾಣದ ಸಂಘಟನೆಯ ಅನಿವಾರ್ಯತೆ ಹೆಚ್ಚಿತು. ಕನ್ನಡ ಚಳವಳಿಯನ್ನು ಸಕ್ರಿಯವಾಗಿ ನಡೆಸಿಕೊಂಡು ಹೋಗಲು ನಾಡಿನ ಕನ್ನಡ ಸಂಘ-ಸಂಸ್ಥೆಗಳೆಲ್ಲವನ್ನು ಸೇರಿಸಿದಂತೆ ಒಂದು ಸಂಯುಕ್ತ ರಂಗದ ಅಥವಾ ವೇದಿಕೆಯ ಜರೂರು ಇತ್ತು. ಇದರ ಅಂತಿಮ ಪರಿಣಾಮವೆ 'ಕರ್ನಾಟಕ ಸಂಯುಕ್ತ ರಂಗ'ದ ಅಸ್ತಿತ್ವ.

ಕರ್ನಾಟಕ ಸಂಯುಕ್ತ ರಂಗವು ಹಿಂದಿನ 'ಕನ್ನಡ ಯುವಜನ ಸಭಾ'ದವರನ್ನು ಒಳಗೊಂಡಂತೆ ೧೯೬೨ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಹುಟ್ಟು ಕನ್ನಡ ಚಳವಳಿ ಚರಿತ್ರೆಯಲ್ಲಿ ಒಂದು ಮುಖ್ಯವಾದ ತಿರುವು. ಏಕೆಂದರೆ ಈ ರಂಗದಲ್ಲಿ ಕನ್ನಡದ ಕೆಲಸಗಳಿಗೆ, ಚಳವಳಿಗಾಗಿಯೆ ತಮ್ಮನ್ನು ತಾವು ತೊಡಗಿಸಿಕೊಂಡಿದ್ದವರ ಸಂಖ್ಯೆಯೆ ಹೆಚ್ಚು. ಅವರುಗಳಲ್ಲಿ ಅ.ನ.ಕೃ, ಮ. ರಾಮಮೂರ್ತಿ, ನಾಡಿಗೇರ ಕೃಷ್ಣರಾವ್,

ತಿ. ತಾ. ಶರ್ಮ, ತ. ರಾ. ಸುಬ್ಬರಾವ್, ಅ. ನ. ಸುಬ್ಬರಾವ್, ಮೈ. ಸು. ಶೇಷಗಿರಿರಾವ್, ಬೀಚಿ, ವೀರಕೇಸರಿ ಸೀತಾರಾಮಶಾಸ್ತ್ರಿ, ನಾ. ಕೃ. ಸತ್ಯನಾರಾಯಣ, ಜಿ. ಸಿ. ಈಶ್ವರಪ್ಪ, ಎಂ. ಎಸ್. ನಟರಾಜ್, ಭಾರತೀಂದ್ರ ಸ್ವಾಮಿ ಮೊದಲಾದವರು ಪ್ರಮುಖರು. ಸುಮಾರು ಅರವತ್ತಕ್ಕೂ ಹೆಚ್ಚಿನ ಕನ್ನಡ ಸಂಘ-ಸಂಸ್ಥೆಗಳು 'ಕರ್ನಾಟಕ ಸಂಯುಕ್ತ ರಂಗ'ವಡಿಯಲ್ಲಿ ಸಂಘಟಿತವಾದವು. ಅಲ್ಲದೆ ರಂಗದ ಕಾರ್ಯಕ್ರಮ, ಮಾರ್ಗದರ್ಶನಗಳಲ್ಲಿ ಮುಂದುವರೆದದ್ದು ಗಮನಾರ್ಹ. ಈ ರಂಗಕ್ಕೆ ಅಧ್ಯಕ್ಷರಾಗಿ ಅ.ನ.ಕೃ. ಹಾಗೂ ಕಾರ್ಯದರ್ಶಿಯಾಗಿ ಮ. ರಾಮಮೂರ್ತಿ ಅವರು ಆಯ್ಕೆಯಾಗಿ ಚಳವಳಿಯ ರೂಪುರೇಷೆಗಳನ್ನು ಸಿದ್ಧಪಡಿಸಲು ಆರಂಭಿಸಿದರು. ಬೆಂಗಳೂರು ನಗರ ಅಥವಾ ರಾಜ್ಯದ ಇತರೆಡೆಗಳಲ್ಲಿ ಒಂದಲ್ಲಾ ಒಂದು ಸಮಾರಂಭದಲ್ಲಿ ಇವರಿಬ್ಬರು ಭಾಗವಹಿಸಿ ಕನ್ನಡದ ಸಮಸ್ಯೆಗಳ ನಿವಾರಣೆಗೆ ಜಾಗೃತಿ ಮೂಡಿಸುತ್ತಿದ್ದುದು ಸಾಮಾನ್ಯ ದೃಶ್ಯವಾಗಿತ್ತು. ಇದರಿಂದ ಮತ್ತಷ್ಟು ಕನ್ನಡ ಪರವಾದ ಸಂಸ್ಥೆಗಳು ಹುಟ್ಟಿಕೊಂಡವು.

'ಕನ್ನಡ ಯುವಜನ ಸಭಾ'ವು 'ಕರ್ನಾಟಕ ಸಂಯುಕ್ತ ರಂಗ'ವು ರಚನೆಯಾದ ಮೇಲೂ ತನ್ನ ಅಸ್ತಿತ್ವವನ್ನು ಹಾಗೆಯೇ ಉಳಿಸಿಕೊಳ್ಳಲು ಪ್ರಯತ್ನಿಸಿತು. ಕೋಣಂದೂರು ಲಿಂಗಪ್ಪ ಮತ್ತು ಅವರ ಸಂಗಡಿಗರು ೧೯೬೩ರಲ್ಲಿ 'ಸಭಾ'ದ ಎರಡನೆಯ ರಾಜ್ಯಮಟ್ಟದ ಸಮಾವೇಶವನ್ನು ಸಾಗರದಲ್ಲಿ ನಡೆಸಿದರು. ಇದರ ಅಧ್ಯಕ್ಷತೆ ವಹಿಸಿದ್ದವರು ಕವಿ ಎಂ. ಗೋಪಾಲಕೃಷ್ಣ ಅಡಿಗ. ಈ ಸಮಾವೇಶದಲ್ಲಿ ಕನ್ನಡಪರವಾದ ನಿರ್ಣಯಗಳನ್ನು ಅನುಮೋದಿಸಿ ಪಾಸು ಮಾಡಲಾಯಿತು. ಇದಾದ ಮೇಲೆ ಅ.ನ.ಕೃ ಹಾಗೂ ಕೋಣಂದೂರು ಲಿಂಗಪ್ಪ ಅವರುಗಳ ನಡುವಿನ ಸಂಬಂಧಗಳು ಸರಿಬರಲಿಲ್ಲ. ಕೆಲವು ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡವು. ಕನ್ನಡ ಚಳವಳಿ ತೀವ್ರ ಸ್ವರೂಪಕ್ಕೆ ಬರುತ್ತಿದ್ದ ಸನ್ನಿವೇಶದಲ್ಲಿ ದಿನೆ ದಿನೆ ಅನೇಕ ಹೊಸ ಮುಖಗಳು ಕಾಣಿಸಿಕೊಳ್ಳತೊಡಗಿದವು. ಲಿಂಗಪ್ಪ ಮೊದಲಾದವರು ಕ್ರಮೇಣ ಚಳವಳಿಯಿಂದ ಹಿಂದಕ್ಕೆ ಸರಿಯುತ್ತಿದ್ದಂತೆಲ್ಲಾ ಕೆಲವು ಸ್ವಾರ್ಥ, ಅವಕಾಶವಾದಿ ಕನ್ನಡ ಚಳವಳಿಕಾರರು ಈ ಧಾರೆಗೆ ಸೇರಿಕೊಳ್ಳಲು ಆರಂಭಿಸಿದ್ದರು. 'ಕನ್ನಡ ಯುವಜನ ಸಭಾ'ವನ್ನು ಹುಟ್ಟುಹಾಕಿ, ಕನ್ನಡ ಚಳವಳಿಯನ್ನು ರೂಪಿಸಿದ ಕೋಣಂದೂರು ಲಿಂಗಪ್ಪ ಮತ್ತು ಅವರ ಸಂಗಡಿಗರು 'ಸಂಯುಕ್ತ ರಂಗ'ವು ಅಸ್ತಿತ್ವಕ್ಕೆ ಬಂದ ಮೇಲೆ ಚಳವಳಿಯ ಮುಖ್ಯಧಾರೆಗೆ ಬರಲು ಸಾಧ್ಯ ಆಗಲೇ ಇಲ್ಲ. ಆದರೆ ಕನ್ನಡ ಚಳವಳಿಗೆ ಬೇಕಾದ ಹಿನ್ನೆಲೆ, ವೇದಿಕೆಗಳನ್ನು ನಿರ್ಮಿಸಿಕೊಟ್ಟವರು ಇವರೇ ಎಂಬುದು ಗಮನಾರ್ಹ ಸಂಗತಿ.

### ೪.೨.೯ ಮ. ರಾಮಮೂರ್ತಿ ನೇತೃತ್ವದ ಮೊದಲ ರಾಜ್ಯೋತ್ಸವ

೧೯೬೩ರ ವೇಳೆಗೆ ಕರ್ನಾಟಕವು ಏಕೀಕರಣಗೊಂಡು ಏಳು ವರ್ಷಗಳು ಆಗಿದ್ದವು. ಕನ್ನಡಿಗರ ಆಶಯಗಳಲ್ಲಿ ಬಹುಪಾಲು ಇನ್ನೂ ಈಡೇರದೆ ಹಾಗೆಯೇ ಉಳಿದಿದ್ದವು. ಆದರೆ ಈ ಕುರಿತು ಜಾಗೃತಿ ಮೂಡಿಸಿ ನವೆಂಬರ್ ಒಂದರ ದಿನವನ್ನು ಸ್ವಾತಂತ್ರ್ಯೋತ್ಸವದ ರೀತಿಯಲ್ಲಿ ಆಚರಿಸಲು ಸಂಯುಕ್ತ ರಂಗ ಯೋಜಿಸಿತು. ನಾಡಿನ ಎಲ್ಲ ಸಂಘಟನೆಗಳನ್ನೂ (ಅವರಲ್ಲೂ ಬೆಂಗಳೂರು ನಗರದ ಸಂಘಟನೆಗಳನ್ನು) ಸೇರಿಸಿಕೊಂಡು ೧-೧೧-೧೯೬೩ರ

ರಾಜ್ಯೋತ್ಸವವನ್ನು ಬೆಂಗಳೂರಿನ ಧರ್ಮಾಂಬುಧಿ ಕೆರೆಯ (ಸುಭಾಶ್ ನಗರದ) ಮೈದಾನದಲ್ಲಿ ಅದ್ದೂರಿಯಾಗಿ ಆಚರಿಸಲಾಯಿತು. ಕನ್ನಡ ಕುಲದೇವಿ ಭುವನೇಶ್ವರಿಯ ಮೆರವಣಿಗೆ, ಸ್ತಬ್ಧ ಚಿತ್ರಗಳ ಪ್ರದರ್ಶನಗಳನ್ನು ಒಳಗೊಂಡಿದ್ದ ಈ ರಾಜ್ಯೋತ್ಸವದಲ್ಲಿ ಮೊದಲ ಬಾರಿಗೆ ಲಕ್ಷಾಂತರ ಜನ ಕನ್ನಡಿಗರು ಭಾಗವಹಿಸಿದ್ದರು ಎಂಬುದು ಗಮನಾರ್ಹ. ಎಂ. ಜಿ. ರಸ್ತೆಯ 'ಲಿಬರ್ಟಿ' ಚಿತ್ರಮಂದಿರದ ಮಾಲೀಕರು ನೀಡಿದ್ದ ಒಂದು ಸಾವಿರ ರೂಪಾಯಿಗಳ ಕಾಣಿಕೆ ಹಾಗೂ ಮೆರವಣಿಗೆಗಾಗಿ ತೆರೆದ ಕಾರನ್ನು ಬಿಟ್ಟರೆ ಉಳಿದ ಎಲ್ಲ ಜವಾಬ್ದಾರಿಗಳನ್ನು ಹೊತ್ತವರು ಮ. ರಾಮಮೂರ್ತಿ ಅವರೆ. ಕನ್ನಡ ಚಳವಳಿ ಚರಿತ್ರೆಯಲ್ಲಿ ಈ ಅದ್ದೂರಿ ರಾಜ್ಯೋತ್ಸವವೇ (ಮ. ರಾಮಮೂರ್ತಿಗಳ ನೇತೃತ್ವದಲ್ಲಿ) ಮೊಟ್ಟ ಮೊದಲ ರಾಜ್ಯೋತ್ಸವ ಎನ್ನಲಾಗಿದೆ. ಆದರೆ ಇದರ ವಿಪರೀತವಾದ ಖರ್ಚಿನಿಂದಾಗಿ ರಾಮಮೂರ್ತಿ ಅವರು ಸಾಲಗಾರರಾಗಿದ್ದುಂಟು. ಆದುದರಿಂದಲೇ ಅವರು ಗೆಳೆಯರೊಬ್ಬರ ಬಳಿ ತಮ್ಮ ಅಳಲನ್ನು ಹೇಳಿಕೊಂಡಿದ್ದರು. ಇಂಥ ಕನ್ನಡದ ಕೆಲಸಗಳಿಗೆ ಕನ್ನಡಿಗರು ತನು-ಮನ-�ನಗಳನ್ನು ನೀಡಬೇಕೆಂಬುದು ಅವರ ಅಭಿಲಾಷೆ (ಕೊರಗು) ಆಗಿತ್ತು.[೧೧]

ಮ. ರಾಮಮೂರ್ತಿ ಅವರು ಕನ್ನಡದ ಹೆಸರಿನಲ್ಲಿ ಆರ್ಥಿಕವಾಗಿ ಬರಿದಾದರೂ ಸಹ ಉತ್ಸಾಹದಲ್ಲಿ ಮಾತ್ರ ಶ್ರೀಮಂತರಾಗಿದ್ದರು ಎನ್ನಲಾಗಿದೆ. ಅವರು ಕನ್ನಡ ಚಳವಳಿಯ ನಾಯಕರಲ್ಲೇ ಅಗ್ರಗಣ್ಯರಾಗಿ ಅಭಿವ್ಯಕ್ತಗೊಂಡದ್ದು ಅವರ ಕ್ರಿಯಾಶೀಲ ಕನ್ನಡದ ಕೆಲಸಗಳಿಂದ. ಕಾರ್ಯಕರ್ತರಿಗೆ ಎಂಥ ಸಮಸ್ಯೆಗಳು ಎದುರಾದರೂ ಮುಂದೆ ಬಂದು ಬಗೆಹರಿಸುವ ಕಾಳಜಿ ಇವರಲ್ಲಿತ್ತು. ಅನೇಕ ವೇಳೆ ಚಳವಳಿಗಾರರನ್ನು ಪೋಲೀಸರು ಬಂಧಿಸಿದಾಗ ಅವರಿಗೆ ಜಾಮೀನು ನೀಡಿ ಬಿಡುಗಡೆಗೊಳಿಸುತ್ತಿದ್ದುವರು ರಾಮಮೂರ್ತಿ ಅವರೆ. ಹೀಗಾಗಿ ಇವರ ಮೇಲಿನ ವೈಯಕ್ತಿಕ ಮೊಕದ್ದಮೆಗಳು, ಇತರರಿಗೆ ಜಾಮೀನು ನೀಡಿದ ಮೊಕದ್ದಮೆಗಳು ಸಾಕಷ್ಟು ಇದ್ದವು. ಕೋರ್ಟಿನ ಕಟಕಟೆ ಹತ್ತುವುದರ ಜೊತೆಗೆ ಚಳವಳಿಯನ್ನು ಜೀವಂತವಾಗಿರಿಸಲು ಸಾಕಷ್ಟು ಹೆಣಗಾಡುವಂತೆ ಆಗಿತ್ತು. ಇವರ ಕನ್ನಡದ ಮುಂದಾಳತ್ವವನ್ನು ಗಮನಿಸಿದ ಅವರ ಅಭಿಮಾನಿಗಳು 'ಕನ್ನಡ ಸೇನಾನಿ' ಎಂಬ ಬಿರುದನ್ನು ಕೊಟ್ಟಿದ್ದಾರೆ.

### ೪.೨.೧೦ ಕನ್ನಡ ಚಲನಚಿತ್ರರಂಗ ಮತ್ತು ಚಳವಳಿ

ಕನ್ನಡ ಚಲನಚಿತ್ರರಂಗಕ್ಕೂ ೧೯೬೦ರ ದಶಕದ ಕನ್ನಡ ಚಳುವಳಿಗಳಿಗೂ ಕೆಲವು ಒಳಸಂಬಂಧಗಳಿವೆ. ಕನ್ನಡ ನಾಡಿನಲ್ಲಿ ಕನ್ನಡ ಚಲನಚಿತ್ರಗಳಿಗಿಂತ ತಮಿಳು, ತೆಲುಗು, ಹಿಂದಿ, ಮಲೆಯಾಳಿ, ಮರಾಠಿ ಚಲನಚಿತ್ರಗಳೇ ಹೆಚ್ಚಾಗಿ ಪ್ರದರ್ಶನವಾಗುತ್ತಿದ್ದ ಸಂದರ್ಭ ಅದು. ರಂಗಭೂಮಿಯಿಂದ ಬಂದ ಅನೇಕ ಕನ್ನಡ ಕಲಾವಿದರು ಮೇರು ನಟರೆಂದು ಖ್ಯಾತಿ ಪಡೆದು ಚಲನಚಿತ್ರದಲ್ಲೂ ಹೆಸರು ಮಾಡಿದ್ದರು. ಆದರೆ ವರ್ಷದಲ್ಲಿ ನಾಲ್ಕೈದು ಕನ್ನಡ ಚಲನಚಿತ್ರಗಳು ಮಾತ್ರ ಬಿಡುಗಡೆ ಆಗುತ್ತಿದ್ದವು. ಉಳಿದ ಬೇರೆ ಭಾಷೆಗಳ ಚಿತ್ರಗಳು ಗಣನೀಯವಾಗಿ ಬಿಡುಗಡೆಯಾಗಿ ಪ್ರದರ್ಶನವಾಗುತ್ತಿದ್ದರಿಂದ ಕನ್ನಡದಲ್ಲಿ ಒಳ್ಳೆಯ ನಟನಟಿಯರು, ತಂತ್ರಜ್ಞರು ಬೇರೆ ಭಾಷೆಗಳಿಗೆ ವಲಸೆ ಹೋಗಿ ಒಳ್ಳೆಯ ಖ್ಯಾತಿ, ಹಣವನ್ನು ಗಳಿಸುತ್ತಿದ್ದರು. ಇದಕ್ಕೆ ಮತ್ತೊಂದು ಕಾರಣ ನಮ್ಮಲ್ಲಿ ಒಳ್ಳೆಯ ಸುಸಜ್ಜಿತ 'ಸ್ಟುಡಿಯೋ'ಗಳಿಲ್ಲದ್ದುದು. ನಮ್ಮವರು ಮದರಾಸು, ಸೇಲಂ, ಕೊಯಂಬತ್ತೂರು, ಮುಂಬಯಿ, ಕೊಲ್ಹಾಪುರಗಳಿಗೆ ಸ್ಟುಡಿಯೋಗಳನ್ನರಿಸಿ ಹೋಗಬೇಕಿತ್ತು. ಅಲ್ಲಿ ಕನ್ನಡ ಚಲನಚಿತ್ರ

ನಿರ್ಮಾಪಕರಿಗೆ ಒಳ್ಳೆಯ ವಾತಾವರಣವಿರಲಿಲ್ಲ. ಕೆಲವು ಕನ್ನಡ ಚಲನಚಿತ್ರ ನಿರ್ಮಾಪಕರು ಕನ್ನಡದ ಕಾದಂಬರಿ, ಕತೆಗಳನ್ನು ಲೇಖಕರ ಅನುಮತಿಗಳಿಲ್ಲದೆ ಬಳಸಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಬೇರೆ ಭಾಷೆಗಳಲ್ಲಿನ ಲೇಖಕರನ್ನೇ ಆಹ್ವಾನಿಸಿ ಚಿತ್ರಕಥೆಗಳನ್ನು ಬರೆಸುತ್ತಿದ್ದುದು ಉಂಟು.

ಕನ್ನಡ ಚಲನಚಿತ್ರಗಳು ವಿಪರೀತ 'ಡಬ್ಬಿಂಗ್' ಹಾವಳಿಗೆ ಒಳಗಾಗಿದ್ದ ಸಂದರ್ಭ ಅದಾಗಿತ್ತು. ಬೇರೆ ಭಾಷೆಗಳಲ್ಲಿನ ಚಿತ್ರಗಳಿಗೆ ಕನ್ನಡದ ಸಂವಾದವನ್ನು 'ಡಬ್' ಮಾಡಿ ಕನ್ನಡಿಗರಿಗೆ 'ಕನ್ನಡತನದ' ಸೊಗಡಿಲ್ಲದಂತೆ ಮಾಡಿದ್ದರು. ಬೇರೆ ಭಾಷೆಗಳಿಗೆ ವಲಸೆ ಹೋದ ಕನ್ನಡದ ಕಲಾವಿದರು ಮದರಾಸು ಮೊದಲಾದೆಡೆಗಳಲ್ಲಿ ನೆಲಸಿ ಅವರ ನಾಡು-ನುಡಿ-ಸಂಸ್ಕೃತಿಗಳನ್ನು ಹೊಗಳಿ ಕನ್ನಡಕ್ಕೆ ಅಪಪ್ರಚಾರ ಮಾಡುತ್ತಿದ್ದ ಉದಾಹರಣೆ ಗಳೂ ಇದ್ದವು. ಕೆಲವರಂತೂ ಅಲ್ಲಿನ ಶಾಲೆ, ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿ ಕನ್ನಡಿಗರನ್ನು ಅಲಕ್ಷಿಸಿದ್ದು ಉಂಟು. ಬೆಂಗಳೂರಿನ ಕೆಂಪೇಗೌಡ ರಸ್ತೆಯು ಅಂದಿನಿಂದಲೂ (ಈ ಹೊತ್ತಿಗೂ) ಚಲನಚಿತ್ರ ಮಂದಿರಗಳ ಕೇಂದ್ರ ಸ್ಥಾನವಾಗಿತ್ತು. ಇಲ್ಲಿ ಕನ್ನಡ ಚಲನಚಿತ್ರಗಳನ್ನು ಪ್ರದರ್ಶಿಸಲು ಸಿನಿಮಾಮಂದಿರಗಳ ಮಾಲೀಕರು ಹಿಂದೆ ಮುಂದೆ ನೋಡುತ್ತಿದ್ದರು. ಹೀಗಾಗಿ ಬೇರೆ ಕಡೆಯ ಬಡಾವಣೆಗಳಲ್ಲಿ ಕನ್ನಡ ಚಲನಚಿತ್ರಗಳು ಬಿಡುಗಡೆಗೊಳ್ಳುತ್ತಿದ್ದವು. ಕರ್ನಾಟಕ ಸರ್ಕಾರವೇ ಕನ್ನಡಿಗರಿಗೆ ಪ್ರೋತ್ಸಾಹ ಕೊಡದಿದ್ದ ಸಂದರ್ಭ ಇದಾಗಿತ್ತು. ಇಂಥ ಸನ್ನಿವೇಶದಲ್ಲಿ ಕನ್ನಡದ ಹಿರಿಯ ಲೇಖಕರು, ಚಳವಳಿಕಾರರು ಕನ್ನಡಿಗರನ್ನು ಎಚ್ಚೆತ್ತುಕೊಳ್ಳಲು ಮನವಿ ಮಾಡಿಕೊಂಡರು.

ಅ.ನ.ಕೃ ಮೊದಲಾದವರು ಈ ಕುರಿತು ಎಲ್ಲ ವೇದಿಕೆ, ಸಭೆ-ಸಮಾರಂಭಗಳಲ್ಲೂ ಎಚ್ಚರಿಸುತ್ತಿದ್ದರು.[೧೨] ಕನ್ನಡ ಯುವಜನ ಸಭಾ (೧೯೬೧), ಸಂಯುಕ್ತ ರಂಗ (೧೯೬೨) ಮೊದಲಾದ ಸಂಘ-ಸಂಸ್ಥೆಗಳು ಈ ಬಗ್ಗೆ ನಿರ್ಣಯಗಳನ್ನು ತೆಗೆದುಕೊಂಡು ಪ್ರತಿಭಟಿಸಲಾರಂಭಿಸಿದ್ದವು. ತಮಿಳು, ತೆಲುಗು, ಹಿಂದಿ ಚಲನಚಿತ್ರಗಳೇ ಹೆಚ್ಚು ಪ್ರದರ್ಶಿಸುತ್ತಿದ್ದ ಚಿತ್ರಮಂದಿರಗಳಲ್ಲಿ ಕನ್ನಡದ ಯುವಕರು ಕನ್ನಡ ಚಿತ್ರಗಳ ಪ್ರದರ್ಶನಕ್ಕಾಗಿ ಒತ್ತಾಯಿಸಿದ್ದುಂಟು. ಈ ಸನ್ನಿವೇಶದಲ್ಲಿಯೇ ಯುವಕರಾಗಿದ್ದ ವಾಟಾಳ್ ನಾಗರಾಜ್ ಮೊದಲಾದವರು ಹೋಟೇಲು, ಖಾಸಗಿ ಸಂಘ-ಸಂಸ್ಥೆಗಳಲ್ಲಿನ ಯುವಕರನ್ನು ಒಟ್ಟುಗೂಡಿಸಿ ಚಿತ್ರಮಂದಿರಗಳ ಮುಂದೆ ಪ್ರತಿಭಟಿಸಿದ್ದು. ಕನ್ನಡ ಚಿತ್ರಗಳಿಗೆ ಬಂಡವಾಳಗಾರರ ಕೊರತೆ ಇದ್ದುದರಿಂದ ಕನ್ನಡಿಗರಿಗೆ ಮುಂದೆ ಬಂದು ಹಣ ತೊಡಗಿಸಲು ಕೇಳಿಕೊಳ್ಳಲಾಯಿತು. ರಾಜಕುಮಾರ್, ಜಿ. ವಿ. ಅಯ್ಯರ್, ಬಾಲಕೃಷ್ಣ, ನರಸಿಂಹರಾಜು ಮೊದಲಾದ ಕಲಾವಿದರಂತೂ ತಾವೇ ವೇದಿಕೆಯೊಂದನ್ನು ನಿರ್ಮಿಸಿಕೊಂಡು ('ಕನ್ನಡ ಚಲನಚಿತ್ರ ಕಲಾವಿದರ ಸಂಘ'ದ ಮೂಲಕ) ಕನ್ನಡ ಚಿತ್ರಗಳನ್ನು ನಿರ್ಮಿಸಿದ್ದೂ ಸಹ ಗಮನಾರ್ಹವಾದುದು.[೧೩] ಮ. ರಾಮಮೂರ್ತಿ ಅ.ನ.ಕೃ ಮೊದಲಾದವರ ಸಭೆ-ಸಮಾರಂಭ, ಚಳವಳಿಗಳಲ್ಲಿ ವಾಟಾಳ್ ನಾಗರಾಜ್ ಕಾಣಿಸಿಕೊಳ್ಳುವುದರ ಮೂಲಕ ೧೯೬೩-೬೪ರ ವೇಳೆಗೆ ಚಳವಳಿಯನ್ನು ಪ್ರವೇಶಿಸಿದರು. ಈ ಮಧ್ಯೆ ಹಲವು ಕನ್ನಡ ಸಂಘಟನೆಗಳ ಕನ್ನಡ ಚಲನಚಿತ್ರ ಪರವಾದ ಕಾರ್ಯಕ್ರಮಗಳು ಮತ್ತಷ್ಟು ಹುರುಪು ನೀಡುವಂತೆ ಮಾಡಿದ್ದವು. ಇದರಿಂದ ಕನ್ನಡದ ಕಲಾವಿದರಿಗೆ, ನಿರ್ಮಾಪಕರುಗಳಿಗೆ ಹಣ ತೊಡಗಿಸಲು,

ನಟಿಸಲು ಭರವಸೆ ಮೂಡುವಂತಾಯಿತು. ರಾಜ್ಯೋತ್ಸವದ ಸಂದರ್ಭಗಳಲ್ಲಿ ಎಲ್ಲೆಡೆ ಕನ್ನಡ ಚಲನಚಿತ್ರಗಳನ್ನೇ ಪ್ರದರ್ಶಿಸುವಂತೆ ಚಳವಳಿಕಾರರು ಒತ್ತಾಯಿಸಲು ಆರಂಭಿಸಿದ್ದು ಈ ಘಟ್ಟದಲ್ಲಿಯೇ.

ಮದರಾಸಿನಲ್ಲಿಯೂ ತಮಿಳು ಚಲನಚಿತ್ರರಂಗ ಬಹಳಷ್ಟು ಪ್ರಗತಿದಾಯಕವಾಗಿ ಬೆಳೆದಿತ್ತು. ತಮಿಳರು ತಮ್ಮನಾಡು-ನುಡಿ, ಕಲೆ, ಚರಿತ್ರೆ, ಸಂಸ್ಕೃತಿಗಳನ್ನು ಜನ ಸಾಮಾನ್ಯರಿಗೆ, ಅನಕ್ಷರಸ್ಥರಿಗೆ ಮೂಡಿಸಲು ಚಲನಚಿತ್ರ ಮಾಧ್ಯಮವೇ ಸರಿಯಾದ ಸರಳ ಮಾರ್ಗವೆಂದು ಅರಿತಿದ್ದರು. ಅಲ್ಲದೆ ಅಲ್ಲಿನ ಡಿ.ಎಂ.ಕೆ ಪಕ್ಷವು ರಾಜಕೀಯವಾಗಿ ಬಲಿಷ್ಠವಾಗಲು ನಟ ಎಂ. ಜಿ. ರಾಮಚಂದ್ರನ್‌ರನ್ನು ಬಳಸಿಕೊಂಡಿತು. ಭಾಷಾಭಿಮಾನ ವನ್ನು ಮೂಡಿಸಲು ತಮಿಳು ಬಾವುಟವನ್ನು (ಡಿ.ಎಂ.ಕೆ) ಪ್ರತಿನಿಧಿಸಲು ಒಪ್ಪುವ ಚಿತ್ರ ಕಥೆಗಳನ್ನು, ಸಾಹಿತ್ಯವನ್ನು ರಚಿಸಲಾಗುತ್ತಿತ್ತು. ಡಿ.ಎಂ.ಕೆ ಪಕ್ಷದ ನಾಯಕ ಎಂ. ಕರುಣಾನಿಧಿ ಅವರೇ ಸ್ವತಃ ಚಿತ್ರ ಸಾಹಿತ್ಯವನ್ನು ರಚಿಸಿದ್ದು ಉಂಟು. ನಮ್ಮಲ್ಲಿಯೂ ಕು. ರಾ. ಸೀತಾರಾಮಶಾಸ್ತ್ರಿ, ಹುಣಸೂರು ಕೃಷ್ಣಮೂರ್ತಿ, ಎಸ್. ಕೆ. ಕರೀಂಖಾನ್ ಮೊದಲಾದ ಕೆಲವೇ ಮಂದಿ ಈ ಕೆಲಸವನ್ನು ಮಾಡುತ್ತಿದ್ದರು. ಆದರೆ, ತಮಿಳರಷ್ಟು ಪ್ರಬಲ ಆಗಲಿಲ್ಲ. ಎಂ. ಜಿ. ಆರ್ ನಟಿಸಿರುವ ಚಿತ್ರಗಳು ಬೆಂಗಳೂರಿನಲ್ಲಿ ತೆರೆಕಂಡಾಗ ಇಲ್ಲಿನ ಡಿ.ಎಂ.ಕೆ ಪಕ್ಷದ ಕಾರ್ಯಕರ್ತರು, ತಮಿಳರು ಸಾವಿರಾರು ಸಂಖ್ಯೆಯಲ್ಲಿ ಸಿನಿಮಾ ಮಂದಿರದ ಮುಂದೆ ಸೇರುತ್ತಿದ್ದರು. ಅಲ್ಲದೆ ತಮಿಳು ನಟ-ನಟಿಯರ ಅಭಿಮಾನಿಗಳು ಹಾಗೂ ಅವರ ಸಂಘಟನೆಗಳು 'ಸ್ಟಾರ್' (ಬಿದಿರಿನ ನಕ್ಷತ್ರ)ಗಳನ್ನು ಮಾಡಿ ಥಿಯೇಟರ್‌ಗಳ ಮುಂದೆಲ್ಲಾ ತೂಗು ಹಾಕುತ್ತಿದ್ದರು. ಅಲ್ಲದೆ ಡಿ.ಎಂ.ಕೆ ಬಾವುಟಗಳನ್ನು ಹಾರಿಸಲಾಗುತ್ತಿತ್ತು. ಈ ರೀತಿಯ ಆಚರಣೆಗಳು ಸ್ಥಳೀಯ ಕನ್ನಡಿಗರನ್ನು ಕೆರಳಿಸದೆ ಇರಲಿಲ್ಲ. ಕನ್ನಡ ಕಾರ್ಯಕರ್ತರು ತಮ್ಮ ವರನಟ ರಾಜಕುಮಾರ್ ಅವರನ್ನು ಎಂ. ಜಿ. ಆರ್‌ಗೆ ಪ್ರತಿಯಾಗಿ ನಿಲ್ಲಿಸುತ್ತಿದ್ದುದುಂಟು. ರಾಜಕುಮಾರ್ ಹಾಗೂ ಉಳಿದ ನಟರ 'ಸ್ಟಾರ್' ಗಳನ್ನು ಕನ್ನಡದ ಅಭಿಮಾನಿಗಳು ತಮಿಳರಿಗೆ ಸ್ಪರ್ಧಾತ್ಮಕವಾಗಿ ಹಾಕಲಾರಂಭಿಸಿದರು. ಈ ಎರಡೂ ಭಾಷಿಕರಿಗೂ ಒಂದು ರೀತಿಯ ಭಾಷಿಕವಾದ ದ್ವೇಷ-ವೈಷಮ್ಯಗಳು ಬೆಳೆಯಲಾರಂಭಿಸಿದವು. ಆದರೆ, ಅ.ನ.ಕೃ, ಮ. ರಾಮಮೂರ್ತಿ ಮೊದಲಾದ ಕನ್ನಡದ ಚಳವಳಿ ನಾಯಕರು ಎಂದಿಗೂ ಹಿಂಸಾತ್ಮಕ ಪ್ರತಿಭಟನೆಗಳಿಗೆ ಉತ್ತೇಜನ ನೀಡಿರಲಿಲ್ಲ. ೧೯೬೪ರ ಸಂದರ್ಭದಲ್ಲಿ ತಮಿಳು ಭಾಷಿಕರು ಬೆಂಗಳೂರಿನ ಎಲ್ಲೆಡೆ ಕನ್ನಡ ವಿರೋಧಿ ಚಟುವಟಿಕೆಗಳನ್ನು ಆರಂಭಿಸಿದ್ದರು. ತಾಳ್ಮೆಯಿಂದಿದ್ದ ಕನ್ನಡ ಕಾರ್ಯಕರ್ತರಿಗೆ 'ಕಾಂಚಿ ತಲೈವನ್' ಎಂಬ ತಮಿಳು ಚಲನಚಿತ್ರದ ಬಿಡುಗಡೆಯು ಕನ್ನಡ ಚಳವಳಿಗೆ ಹೊಸ ತಿರುವೊಂದನ್ನು ತಂದುಕೊಟ್ಟಿತು.

### ೪.೨.೧೧ 'ಕಾಂಚಿ ತಲೈವನ್' ಚಿತ್ರದ ವಿರುದ್ಧ ಪ್ರತಿಭಟನೆ

ಬಾದಾಮಿ ಚಾಲುಕ್ಯರ ದೊರೆ ಇಮ್ಮಡಿ ಪುಲಿಕೇಶಿ ಹಾಗೂ ಕಂಚಿಯ ಪಲ್ಲವರ ದೊರೆ ಮೊದಲನೆಯ ನರಸಿಂಹವರ್ಮನ ನಡುವೆ ನಡೆದ ಯುದ್ಧದ ಕಥೆಯೇ 'ಕಾಂಚಿತಲೈವನ್' ತಮಿಳು ಚಲನಚಿತ್ರ (೧೯೬೪). ಈ ಚಿತ್ರದಲ್ಲಿ ಪುಲಿಕೇಶಿಯನ್ನು ಸೋಲಿಸಿದ ತಮಿಳು ದೊರೆ ಕನ್ನಡಿಗರನ್ನು ಅವಮಾನಿಸಲೋ ಎಂಬಂತೆ ಕರ್ನಾಟಕದ ಬಾವುಟವನ್ನು ಕಾಲಿನಲ್ಲಿ ತುಳಿಯುವ ದೃಶ್ಯಗಳನ್ನು ಚಿತ್ರೀಕರಿಸಲಾಗಿತ್ತು. ಚರಿತ್ರೆಯ ಇಂಥ

ಸೂಕ್ಷ್ಮ ಸಂಗತಿಗಳನ್ನು ವೈಯುಕ್ತಿಕ ಹಾಗೂ ವಾಸ್ತವ ನೆಲೆಗಳಲ್ಲಿ ಅರ್ಥೈಸಿಕೊಂಡ ಬೆಂಗಳೂರಿನ ತಮಿಳರು ಕನ್ನಡಿಗರನ್ನು ಗೇಲಿಮಾಡಿ ಅವಮಾನಿಸಿದರು. ಇದರಿಂದ ಕುಪಿತರಾದ ಸಂಯುಕ್ತ ರಂಗದ ಕನ್ನಡ ಕಾರ್ಯಕರ್ತರು ಆ ಚಿತ್ರ ಪ್ರದರ್ಶನಗೊಳ್ಳುತ್ತಿದ್ದ 'ನ್ಯೂಸಿಟಿ' ಚಿತ್ರಮಂದಿರಕ್ಕೆ ಹೋಗಿ ಕಲ್ಲು ತೂರಿದರು. ಅ.ನ.ಕೃ, ಮ. ರಾಮಮೂರ್ತಿ ಮೊದಲಾದ ಚಳವಳಿ ನಾಯಕರು ಶಾಂತ ರೀತಿಯಲ್ಲಿ ಪ್ರತಿಭಟಿಸಲು ಕಾರ್ಯಕರ್ತರನ್ನು ಕೇಳಿಕೊಂಡಿದ್ದುದು ಪ್ರಯೋಜನಕ್ಕೆ ಬರಲಿಲ್ಲ. ತೀವ್ರ ಪ್ರತಿಭಟನೆಗಳಿಂದಾಗಿ ಆ ಚಿತ್ರದ ನಿರ್ಮಾಪಕರು ಆಕ್ಷೇಪಾರ್ಹ ಕೆಲವು ಭಾಗಗಳನ್ನು ತೆಗೆದು ಹಾಕಲು ನಿರ್ಧರಿಸಿದರು. ನಾಡಿನ ಇತಿಹಾಸ ತಜ್ಞರು, ಚಳವಳಿ ನಾಯಕರು, ವಿದ್ವಾಂಸರು ಹೇಳಿದ ಕೆಲವು ಭಾಗಗಳನ್ನು ತೆಗೆದು ಮತ್ತೆ ಆ ಚಿತ್ರವನ್ನು 'ಮಿನರ್ವ' ಚಿತ್ರಮಂದಿರದಲ್ಲಿ ಪ್ರದರ್ಶಿಸಲು ನಿರ್ಧರಿಸಲಾಯಿತು. ಈ ಚಿತ್ರಮಂದಿರವನ್ನು ಆಗ ತಾನೇ ಹೊಸದಾಗಿ ನವೀಕರಿಸಲಾಗಿತ್ತು. ಈ ಚಿತ್ರ ಮತ್ತೆ ಪ್ರದರ್ಶನವಾದ ಮೊದಲ ದಿನ ಕನ್ನಡ ಕಾರ್ಯಕರ್ತರಲ್ಲಿನ ಕೆಲವರು ಇನ್ನೂ ಕೆಲವು ಆಕ್ಷೇಪಾರ್ಹ ಭಾಗಗಳು ಹಾಗೆಯೇ ಉಳಿದಿದೆ ಎಂದು ಕೆರಳಿದರು. ಚಿತ್ರಮಂದಿರದ ಆಸನಗಳನ್ನು ಹರಿದು, ಸಾಕಷ್ಟು ನಷ್ಟವನ್ನು ಉಂಟು ಮಾಡಲಾಯಿತು. ಈ ಥರದ ವರ್ತನೆಗಳು ಅ.ನ.ಕೃ ಅವರಿಗೆ ಸರಿಕಾಣಲಿಲ್ಲ. ಈ ವೇಳೆಗಾಗಲೇ ಕೆಲವು ರಾಜಕಾರಣಿಗಳು, ಜಾತಿವಾದಿಗಳು ಅ.ನ.ಕೃ ಅವರ ವಿರುದ್ಧ ಪಿತೂರಿಗಳನ್ನು ಮಾಡಿ ಹೆಸರನ್ನು ಕೆಡಿಸತೊಡಗಿದ್ದರು. 'ಅ.ನ.ಕೃ ಅವರು ಪ್ರಾಂತಿಕ ಜಾಗೃತಿಯನ್ನುಂಟು ಮಾಡಿ ರಾಷ್ಟ್ರೀಯ ಭಾವನೆಯನ್ನು ಜನರಿಂದ ದೂರೀಕರಿಸುತ್ತಿದ್ದಾರೆ' ಎಂದೆಲ್ಲಾ ಹಬ್ಬಿಸಿದ್ದರು.[೧೪] ಅವುಗಳಿಗೆಲ್ಲಾ ರಾಯರು ತಕ್ಕ ಉತ್ತರ ನೀಡುತ್ತಿದ್ದುದುಂಟು. ಆದರೂ ಅವರಿಗೆ 'ಕರ್ನಾಟಕ ಸಂಯುಕ್ತ ರಂಗ', ಕನ್ನಡ ಚಳವಳಿಗಳು ತಮ್ಮ ಕೈಮೀರಿ ಕನ್ನಡಿಗರ ಗೌರವವನ್ನು ಕಡಿಮೆ ಮಾಡುವತ್ತ ಸಾಗಿವೆ ಎಂದು ಅನ್ನಿಸುತ್ತಿತ್ತು. ಈ ಹಿನ್ನೆಲೆಯಲ್ಲಿಯೇ ಅ.ನ.ಕೃ ಅವರ ಪತ್ನಿ ಶ್ರೀಮತಿ ಅನ್ನಪೂರ್ಣ ಅವರು 'ಕಾಂಚಿತಲೈವನ್' ಚಲನಚಿತ್ರದಿಂದ ಉದ್ಭವಿಸಿದ್ದ ಕನ್ನಡಿಗರ ಹಿಂಸಾತ್ಮಕ ಪ್ರವೃತ್ತಿಗಳನ್ನು ಕುರಿತಂತೆ -

> "........ ಯಾವಾಗ ನಮ್ಮ 'ಕನ್ನಡ' ಯುವಕರು ಕನ್ನಡಕ್ಕೆ ಗೌರವ ತರಬೇಕೆಂಬ ಹುಮ್ಮಸಿನಲ್ಲಿ ನಮ್ಮ ಗೌರವವನ್ನೇ ಅವನತಿಯ ಕಡೆಗೆ ಒಯ್ದರೋ ಆಗ ರಾಯರಿಗೆ ಬಹಳ ಸಂಕಟವಾಯಿತು. ನೊಂದರು, ಶೋಕಿಸಿದರು. ಹೀಗೇಕಾಯಿತು? ಎಂದು ಹಲುಬಿದರು. ಏನನ್ನಾದರೂ, ರಚನಾತ್ಮಕವಾಗಿ, ಕ್ರಿಯಾತ್ಮಕವಾಗಿ ಮಾಡೋಣ ಎಂದರೆ ನೀರಿನಲ್ಲಿ ಹೋಮ ಮಾಡಿದಂತಾಗುತ್ತದಲ್ಲಾ ಎಂದು ಬಹಳ ವೇದನೆ ಪಟ್ಟರು. ಅಂದೇ ಅದಕ್ಕೆ (ಚಳವಳಿಗೆ) ತಿಲಾಂಜಲಿಯಿತ್ತರು"

- ಎಂಬುದಾಗಿ ಬರೆದಿದ್ದಾರೆ.[೧೫] ಒಟ್ಟಾರೆ ಅ.ನ.ಕೃ ಅವರು ಈ ಘಟನೆಯಿಂದಾಗಿ ಕನ್ನಡ ಚಳವಳಿಯಿಂದ ಹಿಂದಕ್ಕೆ ಸರಿಯುವ ನಿರ್ಧಾರ ತೆಗೆದುಕೊಂಡರು. ಕನ್ನಡ ಕಾರ್ಯಕರ್ತರು ಚಿತ್ರಮಂದಿರವನ್ನು ಧ್ವಂಸ ಮಾಡಿದ್ದು ಮ. ರಾಮಮೂರ್ತಿ ಅವರಿಗೆ ಬೇಸರವನ್ನುಂಟು ಮಾಡಿರಲಿಲ್ಲ. ಬದಲಾಗಿ ಅದನ್ನು 'ಭಾವೋದ್ವೇಗದ ಅನಿವಾರ್ಯತೆ'ಯೆಂದು ಸಮರ್ಥಿಸಿ ಕೊಂಡರು. ಆದರೆ ಈ ಥರದ ಸಮರ್ಥನೆಗಳು ಅ.ನ.ಕೃ ಅವರಿಗೆ ಸರಿಬರುತ್ತಿರಲಿಲ್ಲ.

'ಕಾಂಚಿ ತಲೈವನ್' ಚಲನಚಿತ್ರದ ಆಕ್ಷೇಪಾರ್ಹ ದೃಶ್ಯಗಳನ್ನು ತೆಗೆಯದೆ ಹಾಗೆಯೇ ಭದ್ರಾವತಿಯಲ್ಲಿ ಪ್ರದರ್ಶಿಸಲಾಗುತ್ತಿತ್ತು. ಇದನ್ನರಿತ ಮ. ರಾಮಮೂರ್ತಿ ಅವರು ಪೋಲಿಸರಲ್ಲಿ ಆ ಚಿತ್ರದ ಪ್ರದರ್ಶನವನ್ನು ನಿಲ್ಲಿಸಲು ಕೋರಿದರು. ಆದರೆ ಪ್ರಯೋಜನವಾಗಲಿಲ್ಲ. ಹೀಗಾಗಿ ಕನ್ನಡ ಚಳವಳಿಗಾರರೊಂದಿಗೆ ಭದ್ರಾವತಿ ಪ್ರವೇಶಿಸಿ ಪ್ರತಿಭಟಿಸಲು ಯೋಜಿಸಲಾಯಿತು. ಇದನ್ನು ತಿಳಿದ ಪೋಲಿಸರು ಪ್ರತಿಭಟನಾಕಾರರನ್ನು ಭದ್ರಾವತಿಗೆ ಕಾಲಿರಿಸದಂತೆ ಮಾಡಲು ಅಲ್ಲಿ ನಿಷೇದಾಜ್ಞೆಯನ್ನು ವಿಧಿಸಿದರು. ಯಾವುದನ್ನೂ ಲೆಕ್ಕಿಸದೆ ಮ. ರಾಮಮೂರ್ತಿ ಸಂಗಡಿಗರು ಅಲ್ಲಿಗೆ ತೆರಳಿ ಪ್ರತಿಭಟಿಸಿದ್ದು ಗಲಾಟೆಗೆ ಎಡೆ ಮಾಡಿಕೊಟ್ಟಿತು. ಈ ಸಂದರ್ಭದಲ್ಲಿ ಪೋಲೀಸರು ಲಾಠಿಚಾರ್ಜು, ಅಶ್ರುವಾಯುಗಳನ್ನು ಬಳಸಿದ್ದು ಉಂಟು. ಇಲ್ಲಿಂದ ಮುಂದಕ್ಕೆ ರಾಮಮೂರ್ತಿ ಅವರ ಮೇಲೆ ಪೋಲಿಸ್ ಮೊಕದ್ದಮೆಗಳು ದಾಖಲು ಆಗಲು ಆರಂಭಗೊಂಡವು. ಅಲ್ಲದೆ ಕೆಲವು ಕಾರ್ಯಕರ್ತರಿಗೆ ಅವರು ಜಾಮೀನು ನೀಡಿದ್ದರಿಂದ ಅವು ಸಹ ನ್ಯಾಯಾಲಯವನ್ನು ಪದೇ ಪದೇ ಭೇಟಿಕೊಡುವಂತೆ ಮಾಡಿದ್ದವು. ಇದಾವುದಕ್ಕೂ ಅವರು ಹಾಗೂ ಚಳವಳಿಕಾರರು ಹಿಂಜರಿಯಲಿಲ್ಲ.

### ೪.೨.೧೨ ಹಿರಿಯೂರಿನಲ್ಲಿ ಡಿ.ಎಂ.ಕೆ. ಬಾವುಟದ ವಿರುದ್ಧ ಪ್ರತಿಭಟನೆ

ಬೆಂಗಳೂರಿನಲ್ಲಿ ಈ ಚಲನಚಿತ್ರದ ಘಟನೆಯ ನಂತರ ಡಿ.ಎಂ.ಕೆ ಪಕ್ಷ ಹಾಗೂ ಅವರ ಬಾವುಟದ ಪ್ರದರ್ಶನಗಳು ಹೆಚ್ಚಾದವು. ತಮಿಳರು ವಾಸಿಸುತ್ತಿದ್ದ ಪ್ರದೇಶಗಳಲ್ಲಿ ತಮಿಳು ಬಾವುಟಗಳು (ಕೆಂಪು ಮತ್ತು ಕಪ್ಪು ಬಣ್ಣದ್ದು) ಹಾರಾಡತೊಡಗಿದ್ದವು. ರಾಜ್ಯದ ಬೇರೆಡೆಗಳಲ್ಲೂ (ತಮಿಳರು ಇರುವ ಕಡೆ) ಇದೇ ಥರದ ವಾತಾವರಣ ಇತ್ತು. ಅಂಥದರಲ್ಲಿ ಚಿತ್ರದುರ್ಗದ ಹಿರಿಯೂರಿನಲ್ಲಿ ಡಿ.ಎಂ.ಕೆ ಪಕ್ಷದವರ ಹಾವಳಿ ಹೆಚ್ಚಾಗಿತ್ತು. ಹಿರಿಯೂರಿನ ಪುರಸಭೆಯಲ್ಲಿ ನಾಲ್ಕು ಜನ ಡಿ.ಎಂ.ಕೆ ಸದಸ್ಯರಿದ್ದರು. ಹೀಗಾಗಿ ಊರಿನ ಮಧ್ಯೆ ಇರುವ ಸರ್ಕಲ್ಲಿನಲ್ಲಿ ಆ ಪಕ್ಷದ ಧ್ವಜವನ್ನೆ ಹಾರಾಡಲು ಕಟ್ಟಿದ್ದರು. ಇದನ್ನು ತೆಗೆಸಲು ಸ್ಥಳೀಯ ಕನ್ನಡಿಗರಿಗೆ ಸಾಧ್ಯ ಆಗಿರಲಿಲ್ಲ. ಏಕೆಂದರೆ ಮಾರೀಕಣಿವೆ (ವೇದಾವತಿ) ಅಣೆಕಟ್ಟಿನ ಕೆಲಸದ ವೇಳೆಯಲ್ಲಿ ಅನೇಕ ತಮಿಳರು ಅಲ್ಲಿ ಬಂದು ಶಾಶ್ವತವಾಗಿ ನೆಲೆಸಿದ್ದರು. ಇದರಿಂದಾಗಿ ಕನ್ನಡಿಗರೇ ಅಲ್ಪಸಂಖ್ಯಾತರಾಗಿದ್ದರು. ಕನ್ನಡದ ನೆಲದಲ್ಲಿ ಡಿ.ಎಂ.ಕೆ ಅವರ ತಮಿಳು ಧ್ವಜವನ್ನು ತೆಗೆಸಲು ಸ್ಥಳೀಯರು ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಹಾಗೂ ಅಂದಿನ ಗೃಹಮಂತ್ರಿ ಆರ್. ಎಂ. ಪಾಟೀಲ್‌ರಿಗೆ ಕೇಳಿಕೊಂಡಿದ್ದರು. ಆದರೆ ಏನೂ ಪ್ರಯೋಜನವಾಗಿರಲಿಲ್ಲ. ಹೀಗಾಗಿ ಸಂಯುಕ್ತ ರಂಗದ ರಾಮಮೂರ್ತಿ ಅವರನ್ನು ಈ ಬಗ್ಗೆ ಪ್ರತಿಭಟಿಸಲು ಕೇಳಿಕೊಳ್ಳಲಾಗಿತ್ತು. ಆದ್ದರಿಂದ ರಾಮಮೂರ್ತಿ ಅವರು ಹಿರಿಯೂರಿಗೆ ಬಂದು ಡಾ. ರಂಗಯ್ಯ ಹಾಗೂ ಸ್ಥಳೀಯ ಯುವಕರನ್ನು ಹುರುದುಂಬಿಸಿ ಸಂಜೆ ಬಹಿರಂಗ ಸಭೆ ಕರೆಯಲು ಹೇಳಿದರು. ಈ ಕುರಿತು ಕರಪತ್ರಗಳನ್ನೂ ಹಂಚಲಾಯಿತು. ಅಲ್ಲದೇ ಸ್ಥಳೀಯ ಕಾಂಗ್ರೆಸ್ ನಾಯಕರನ್ನೇ ಸಂಜೆಯ ಸಭೆಗೆ ಅಧ್ಯಕ್ಷರನ್ನಾಗಿ ಮಾಡಲಾಗಿತ್ತು. ಆದರೆ ಅವರು ರಾಷ್ಟ್ರೀಯ ಪಕ್ಷದವರಾದ್ದರಿಂದ ಸ್ಥಳೀಯ ಸಮಸ್ಯೆ, ಧ್ವಜದ ಬಗ್ಗೆ ಮಾತನಾಡದೆ ಹಿಂಜರಿದರು. ಕನ್ನಡ ನಾಡಿನಲ್ಲಿ ಸ್ಥಳೀಯ (ಪ್ರಾದೇಶಿಕ) ರಾಜಕೀಯ ಪಕ್ಷಗಳಿಲ್ಲದೆ ಇದ್ದುದರಿಂದ ಈ ಥರದ ಹಲವು ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯ ಆಗಿರಲಿಲ್ಲ.

ಓರಿಯೂರಿನಲ್ಲಿಯ ಕಾಂಗ್ರೆಸಿಗರು ಚಕಾರವೆತ್ತದ್ದು ರಾಮಮೂರ್ತಿ ಅವರೊಬ್ಬರನ್ನೆ ಮಾತನಾಡುವಂತೆ ಮಾಡಿತ್ತು. ಅವರು ಎಚ್ಚರಿಸಿ, ಕನ್ನಡದ ಕಳಕಳಿಗಾಗಿ ತಾವು ಬಾವುಟವನ್ನು ತೆಗೆಸಲು ಬೆಂಗಳೂರಿನಿಂದ ಬಂದಿರುವುದಾಗಿ ತಿಳಿಸಿದರು. ಯಾವುದೇ ರಾಜಕೀಯ ಪಕ್ಷದ ಬಾವುಟ ಅದರ ಕಛೇರಿಯ ಮೇಲೆ ಮಾತ್ರ ಹಾರಾಡಬೇಕೆಂದು ಹೇಳಿದ ಅವರು ಆ ಸರ್ಕಲ್ಲಿನಲ್ಲಿದ್ದ ಧ್ವಜ ಸ್ತಂಭವನ್ನು ಹತ್ತಿ ಡಿ.ಎಂ.ಕೆ ಬಾವುಟವನ್ನು ಕಿತ್ತುಹಾಕಿದ್ದು ಗಮನಾರ್ಹವಾದ ಸಂಗತಿ.

### ೪.೨.೧೩ ತಮಿಳರ ಭಯೋತ್ಪಾದಕ ಕೃತ್ಯಗಳು

ಬೆಂಗಳೂರಿನಲ್ಲಿಯೂ ಡಿ.ಎಂ.ಕೆ. ಧ್ವಜಗಳ ವಿರುದ್ಧ ಇನ್ನಷ್ಟು ಪ್ರತಿಭಟನೆಗಳು ಆರಂಭವಾದವು. ಬೆಂಗಳೂರಿನಲ್ಲಿ ತಮಿಳು ಹೆಚ್ಚಿರುವ ಜೋಗಪಾಳ್ಯ, ಶ್ರೀರಾಮಪುರ, ರಾಮಚಂದ್ರಪುರ, ನಾಗಪ್ಪ ಬ್ಲಾಕ್, ಕಾಕ್ಸ್‌ಟೌನ್, ಫ್ರೆಜರ್ ಟೌನ್, ದಂಡು ಪ್ರದೇಶ ಮೊದಲಾದ ಕಡೆಗಳಲ್ಲಿ ರಾಮಮೂರ್ತಿಯವರು ಕನ್ನಡಪರ ಭಾಷಣಗಳನ್ನು ಮಾಡಿ ಕನ್ನಡಿಗರಲ್ಲಿ ಧೈರ್ಯ ತುಂಬಿದರು. ಆದರೆ, ತಮಿಳು ಬಾವುಟಕ್ಕೆ ಪ್ರತಿಯಾಗಿ 'ಕನ್ನಡ ಬಾವುಟ'ವೊಂದು ಇರದೇ ಇದ್ದುದು ಕನ್ನಡದ ಕಾರ್ಯಕರ್ತರನ್ನು ಈ ಬಗ್ಗೆ ಯೋಚಿಸುವಂತೆ ಮಾಡಿತ್ತು.

ಬೆಂಗಳೂರಿನ ಅನೇಕ ಕಾರ್ಖಾನೆಗಳಲ್ಲಿದ್ದ ಕನ್ನಡಿಗರಿಗೆ ತಮಿಳು ಕಾರ್ಮಿಕರಿಂದ ಹಾಗೂ ಅವರ ಸಂಘಟನೆಗಳಿಂದ ಕಿರುಕುಳ ಕೊಡುವ ಪ್ರಸಂಗಗಳು ಹೆಚ್ಚಿದವು. ತಮಿಳು ಕಾರ್ಮಿಕರೇ ಕಾರ್ಖಾನೆಗಳಲ್ಲಿರುವ ಕನ್ನಡಿಗರನ್ನು ಹೊಡೆದು, ಹಿಂಸೆ ಮಾಡಿ ತಮಿಳು ಪತ್ರಿಕೆಗಳಲ್ಲಿ 'ತಮಿಳರ ಮೇಲೆ ದೌರ್ಜನ್ಯ' ಆಗುತ್ತಿದೆಯೆಂದು ಬರೆಸುತ್ತಿದ್ದುದು ಉಂಟು. ಇದಕ್ಕೆ 'ದ್ರಾವಿಡ ಮುನ್ನೇತ್ರ ಕಳಗಂ' ಪಕ್ಷದವರ ಸಂಪೂರ್ಣ ಬೆಂಬಲವೂ ಇತ್ತು. ಉದಾಹರಣೆಗೆ ೧೯೬೭ರ ಮೇ ತಿಂಗಳಲ್ಲಿ ಮೈಕೋ ಕಾರ್ಖಾನೆಯಲ್ಲಿನ ಏಳು ಜನ ಕನ್ನಡ ಕಾರ್ಮಿಕರನ್ನು[೧೬] ಅಲ್ಲಿನ ತಮಿಳು ಕಾರ್ಮಿಕರು ಹೊಡೆದದ್ದು ಉಂಟು. ಇದಕ್ಕೆ ಕಾರಣ ಕಾರ್ಮಿಕ ಸಂಘಟನೆಯಲ್ಲಿ ಕನ್ನಡಿಗರು ಪ್ರವೇಶಿಸದಂತೆ ಮಾಡುವುದು. ಅಲ್ಲದೆ 'ಕನ್ನಡ ಸಂಘ'ಗಳು ಹಾಗೂ ಕನ್ನಡಿಗರು ಪ್ರಾಧಾನ್ಯತೆ ಪಡೆಯದೆ ಹಿಂಜರಿಯುವಂತೆ ಮಾಡಲು ಇಂಥ 'ತಮಿಳು ಭಯೋತ್ಪಾದಕ ಗುಂಪು'ಗಳು ಬೆಂಗಳೂರಿನ ಅನೇಕ ಉದ್ದಿಮೆಗಳಲ್ಲಿ 'ಗುಂಡಾಗಿರಿ'ಯನ್ನು ಮಾಡುವುದರ ಮೂಲಕ ಹಿಂಸೆ ನೀಡುತ್ತಿದ್ದವು. ಈ ಹಿನ್ನೆಲೆಯಲ್ಲಿ ಮ. ರಾಮಮೂರ್ತಿ ಅವರಿಗೆ ಅನೇಕ ಉದ್ದಿಮೆಗಳಿಂದ ರಕ್ಷಣೆ ನೀಡುವಂತೆ ಕಾಗದ, ಆಹ್ವಾನಗಳು ಬಾರದೆ ಇರಲಿಲ್ಲ. ಆದ್ದರಿಂದಲೇ ಅವರು ಸರ್ಕಾರಕ್ಕೆ ಕನ್ನಡ ಜನತೆಗೆ ಈ ಕುರಿತು ಮನವರಿಕೆ ಮಾಡಿಕೊಡಲು ಸಣ್ಣ ಪುಸ್ತಿಕೆಗಳನ್ನು ಬರೆದು ಪ್ರಕಟಿಸಿ ಹಂಚುತ್ತಿದ್ದರು.[೧೭] ಅದರಲ್ಲಿ ಅವರು -

> "ನಮಗೆ ಯಾವ ಭಾಷೆಯ ಮೇಲೆ ದ್ವೇಷವಿಲ್ಲದಿದ್ದರೂ ಕನ್ನಡ ನಾಡಿನಲ್ಲಿ ಕನ್ನಡಿಗರ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಬರುವುದಕ್ಕೂ, ಕನ್ನಡ ಕಾರ್ಮಿಕರ ಮೇಲೆ ದೌರ್ಜನ್ಯ ನಡೆಯುವುದಕ್ಕೂ ಅವಕಾಶವಿರಬಾರದು. ಈಗ ಫ್ಯಾಕ್ಟರಿಗೆ ಹೋಗುವ ಕನ್ನಡ ಕಾರ್ಮಿಕರಿಗೆ ಹೊರಗಡೆಯೂ ಫ್ಯಾಕ್ಟರಿಯ ಒಳಗಡೆಯೂ ರಕ್ಷಣೆ ಸಿಗಬೇಕು. ಮುಂದೆ ಕನ್ನಡಿಗರಿಗೆ ಕೆಲಸ ಸಿಕ್ಕುವಂತೆ

ಪ್ರಯತ್ನ ನಡೆಯಬಾರದು. ಇದನ್ನು ನಮ್ಮ ಮಂತ್ರಿಗಳೂ ಮಾನ್ಯಶಾಸಕರೂ, ಬೆಂಗಳೂರು ಪಿತೃಗಳೂ ಮತ್ತು ಮಹಾಜನರೂ ಗಮನಿಸಿ ಸೂಕ್ತ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ"

- ಎಂದು ಮನವಿ ಮಾಡಿಕೊಂಡಿದ್ದರು.[೧೮] ಇಂಥ ಮನವಿಗಳಿಗೆ ಸರ್ಕಾರ ಹಾಗೂ ಪೋಲೀಸರಿಂದ ಯಾವುದೇ ಥರದ ರಕ್ಷಣೆಗಳು ಲಭ್ಯ ಆಗುತ್ತಿರಲಿಲ್ಲ. ಆದ್ದರಿಂದ ರಾಮಮೂರ್ತಿ ಮತ್ತು ಸಂಯುಕ್ತ ರಂಗದ ಕಾರ್ಯಕರ್ತರು ಕನ್ನಡಿಗರು ಎಚ್ಚೆತ್ತುಕೊಳ್ಳದೆ ತಮ್ಮ ನಾಡು-ನುಡಿ-ಸಂಸ್ಕೃತಿಗಳ ಬಗೆಗೆ ಅಭಿಮಾನವನ್ನು ಬೆಳೆಸಿಕೊಳ್ಳದೆ ಕನ್ನಡೇತರರ ದೌರ್ಜನ್ಯಗಳಿಂದ ಮುಕ್ತರಾಗಲು ಸಾಧ್ಯವಿಲ್ಲವೆಂದು ಅರಿತಿದ್ದರು. ಹೀಗಾಗಿ ಸಂಯುಕ್ತ ರಂಗದಿಂದ ನವೆಂಬರ್ ೧, ೧೯೬೪ರ ಎರಡನೆಯ ರಾಜ್ಯೋತ್ಸವಕ್ಕೆ ನಾಡಿನ ಎಲ್ಲ ಕನ್ನಡ ಸಂಘಟನೆಗಳು ಭಾಗವಹಿಸಿ ಒಟ್ಟಾಗುವುದರ ಕಡೆಗೆ ಗಮನಹರಿಸಲಾಯಿತು. ಈ ಬಗ್ಗೆ ಎಲ್ಲರಿಗೂ ಕರಪತ್ರಗಳನ್ನು ರವಾನಿಸಲಾಯಿತು.

### ಟಿಪ್ಪಣಿಗಳು

೧. ಪೂರ್ಣಚಂದ್ರ ತೇಜಸ್ವಿ, ಕೆ. ಪಿ., ಅಣ್ಣನ ನೆನಪುಗಳು, (ಮೈ, ೧೯೯೬), ಪು-೮೨-೮೩.

೨. ಕಾಳೇಗೌಡ ನಾಗವಾರ ಮತ್ತು ನಟರಾಜ ಹುಳಿಯಾರ್, (ಸಂ)., ಭಾಷೆ ಮತ್ತು ಇತಿಹಾಸ, (ಲೋಹಿಯಾ ಸಂಪುಟ-೩), (ಬೆಂ, ೧೯೯೮). ಈ ಸಂಪುಟದಲ್ಲಿ ಲೋಹಿಯಾ ವಿಚಾರಗಳನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ.

೩. ಪೂರ್ಣ ಚಂದ್ರ ತೇಜಸ್ವಿ, ಕೆ. ಪಿ., ಮೇಲಿನದೆ, ಪು-೮೨.

೪. ಈ ಕುರಿತು ಹಾಗೂ ಕನ್ನಡ ಚಳವಳಿ ಕುರಿತಂತೆ ಕೋಣಂದೂರು ಲಿಂಗಪ್ಪ ಅವರನ್ನು ಸಂದರ್ಶನ ಮಾಡಲಾಗಿದೆ. (ಧ್ವನಿ ಸುರುಳಿಗಳಿವೆ).

೫. ಮುಗಳಿ, ರಂ. ಶ್ರೀ., (ಪ್ರ. ಸಂ), ಅಧ್ಯಕ್ಷರ ಭಾಷಣಗಳು, ಸಂ-೩, ಅ.ನ.ಕೃ ಅವರ ಅಧ್ಯಕ್ಷೀಯ ಭಾಷಣ, (ಬೆಂ, ೧೯೭೨), ಪು-೨೫೨.

೬. ಪ್ರಭಾಕರ್, ನಾ., (ಸಂ), ಅ.ನ.ಕೃ ಸ್ಮರಣ ಸಂಪುಟ, (ಮೈ, ೧೯೯೭), ಪು-೧೭೧-೨. (ಅ.ನ.ಕೃ ಅವರು ಕಾಂಗ್ರೆಸ್ಸಿಗರೆ ತಮ್ಮ ವಿರುದ್ಧ ಅಪ ಪ್ರಚಾರ ಮಾಡುತ್ತಿದ್ದರು ಎಂದು ಆರೋಪಿಸಿದ್ದಾರೆ).

೭. ಕೃಷ್ಣರಾವ್, ಅ.ನ., ಬರಹಗಾರನ ಬದುಕು, (ಮಡಗಾಂವ, ೧೯೭೨), ಶ್ರೀಮತಿ ಅ.ನ.ಕೃ ಅವರ ಲೇಖನವನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ. ಪು-೩೪೦-೪೧.

೮. ದಿನಾಂಕ ೬-೨-೧೯೬೨ ರಂದು ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ಪ್ರಕಟವಾಗಿರುವ ವರದಿಯನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ.

೯. ಮುಗಳಿ, ರಂ. ಶ್ರೀ., (ಪ್ರ. ಸಂ.), ಮೇಲಿನದೆ, ಪು-೨೫೭.

೧೦. ದಿನತಂತಿ, ದಿನಸುಡರ್ ಮೊದಲಾದ ತಮಿಳು ದಿನಪತ್ರಿಕೆಗಳು ಕನ್ನಡಿಗರನ್ನು ಭಾಷಾ ಅಂಧಾಭಿಮಾನಿಗಳೆಂದು ಜರಿದವು.

೧೧. ಜಾಣಗೆರೆ ವೆಂಕಟರಾಮಯ್ಯ., (ಪ್ರ. ಸಂ), ಕನ್ನಡ ಸೇನಾನಿ - ನೆನಪಿನ ಸಂಚಿಕೆ, (ಬೆಂ, ೧೯೯೪). ಇದರಲ್ಲಿ ಯು. ಜಿ. ರಂಗನಾಥ್ ಅವರು ಮ. ರಾಮಮೂರ್ತಿ ಅವರೊಂದಿಗಿನ ಸಂವಾದವನ್ನು 'ಶ್ರೀ ಮ. ರಾಮಮೂರ್ತಿ ಮಾಡಿದ ಮೊದಲ ರಾಜ್ಯೋತ್ಸವ' ಎಂಬ ಲೇಖನದಲ್ಲಿ ನೆನಪು ಮಾಡಿಕೊಂಡಿದ್ದಾರೆ.

೧೨. ಮುಗಳಿ, ರಂ. ಶ್ರೀ., (ಪ್ರ. ಸಂ), ಮೈಲಿನದೆ, ಪು - ೨೫೬-೭.

೧೩. ಬಾಲಕೃಷ್ಣ ಅವರಂತು ಅನಂತರದಲ್ಲಿ ಕನ್ನಡದ ಅಭಿಮಾನಕ್ಕಾಗಿ 'ಅಭಿಮಾನಿ' ಸ್ಟುಡಿಯೋವನ್ನ ನಾಡಿಗೆ ನೀಡಿದರು. ತಮಿಳರ ಅಪಮಾನದ ಸೇಡಿಗಾಗಿ ಇದನ್ನು ನಿರ್ಮಿಸಿದರು ಎನ್ನಲಾಗಿದೆ.

೧೪. ಕೃಷ್ಣರಾವ್, ಅ.ನ., ಮೇಲಿನದೆ, ಪು - ೩೪೩.

೧೫. ಕೃಷ್ಣರಾವ್, ಅ.ನ., ಮೇಲಿನದೆ, ಪು - ೩೪೪.

೧೬. ರಾಮಮೂರ್ತಿ, ಮ., ಮೈಕೋ ಕನ್ನಡ ಕಾರ್ಮಿಕರ ದುರವಸ್ಥೆ, (ಬೆಂ, ೧೯೬೪) ಎಸ್. ಜವರಯ್ಯ, ಹೆಚ್. ರಾಮಕೃಷ್ಣಪ್ಪ, ಎಸ್. ಕೆ. ಸಿ. ಜೋಶಿ, ಎಲ್. ನಂಜುಂಡೇಗೌಡ, ಸಿ. ಹೆಚ್. ನರಸಿಂಹಯ್ಯ, ಪಿ. ಕೃಷ್ಣಮೂರ್ತಿ ಹಾಗೂ ಪಿ. ಬಿ. ನರೇಂದ್ರ ಎಂಬ ಈ ಏಳು ಜನ ಕಾರ್ಮಿಕರು ಮತ್ತೆ ಮತ್ತೆ ತಮಿಳು ದೌರ್ಜನ್ಯಕಾರರಿಂದ ಪೆಟ್ಟು ತಿಂದದ್ದುಂಟು. ದೌರ್ಜನ್ಯಕಾರರನ್ನು 'ತಮಿಳು ಭಯೋತ್ಪಾದಕರು' ಎಂದೇ ರಾಮಮೂರ್ತಿ ಅವರು ಕರೆದಿದ್ದಾರೆ. ಪು. ೪-೫.

೧೭. ಮ. ರಾಮಮೂರ್ತಿ ಅವರು ಕನ್ನಡಿಗರ ನ್ಯಾಯ, ಕರುನಾಡಿನಲ್ಲಿ ಕನ್ನಡಿಗರ ಸ್ಥಿತಿ, ಮೈಕೋ ಕನ್ನಡ ಕಾರ್ಮಿಕರ ದುರವಸ್ಥೆ ಮೊದಲಾದ ಪುಸ್ತಿಕೆಗಳನ್ನು ಆಯಾ ಸಂದರ್ಭಕ್ಕೆ ತಕ್ಕ ಹಾಗೆ ಬರೆದು ಪ್ರಕಟಿಸಿದ್ದಾರೆ.

೧೮. ದಿನಾಂಕ ೩೦-೬-೧೯೬೪ ರಂದು ಬೆಂಗಳೂರಿನ ಕನ್ನಡಿಗರಲ್ಲಿ ತಮ್ಮ 'ಮೈಕೋ ಕನ್ನಡ ಕಾರ್ಮಿಕರ ದುರವಸ್ಥೆ' ಎಂಬ ಸಣ್ಣ ಪುಸ್ತಕದಲ್ಲಿ ಮನವಿ ಮಾಡಿಕೊಂಡಿದ್ದಾರೆ. ಪು-೮.



# ೫.೧.೧ ರಾಜಕಾರಣ, ಜಾತೀಯತೆ ಮತ್ತು ಕನ್ನಡ ಚಳವಳಿ

ಕನ್ನಡ ಚಳವಳಿಯಲ್ಲಿ ರಾಜಕಾರಣ, ಜಾತೀಯತೆಯ ತಾರತಮ್ಯಗಳ ಪ್ರವೇಶವು ಕನ್ನಡಿಗರಲ್ಲಿ ಒಡಕು ಧ್ವನಿಗಳು ಕೇಳಿಬರುವಂತೆ ಮಾಡಿತು. ೧೯೬೩-೬೪ರಿಂದ ಈ ಬಗೆಯ ಧೋರಣೆಗಳು ಕನ್ನಡ ಚಳವಳಿಯಲ್ಲಿ ಕಾಣಿಸಿಕೊಳ್ಳಲು ಆರಂಭವಾದವು. ಇದಕ್ಕೆ ಅಂದಿನ ಸಮಯಸಾಧಕ ಮನೋಭಾವದ ವ್ಯಕ್ತಿಗಳು, ಜಾತಿಗಳ ಮುಖಂಡರು, ರಾಜಕೀಯ ಪಕ್ಷಗಳ ಧುರೀಣರು ಹಾಗೂ ಸಮಕಾಲೀನ ಸಂದರ್ಭದಲ್ಲಿ ಆಗುತ್ತಿದ್ದ ಬದಲಾವಣೆಗಳೇ ಕಾರಣ.

'ಕರ್ನಾಟಕ ಸಂಯುಕ್ತ ರಂಗ'ದ ಅ.ನ.ಕೃ, ಮ. ರಾಮಮೂರ್ತಿ, ನಾಡಿಗೇರ ಕೃಷ್ಣರಾವ್, ಮೈ. ಸು. ನಟರಾಜ, ಮೈ. ಸು. ಶೇಷಗಿರಿರಾವ್, ಕರ್ಲಮಂಗಲಂ ಶ್ರೀಕಂಠಯ್ಯ, ಬೆ. ನಿ. ಈಶ್ವರಪ್ಪ ಮೊದಲಾದವರಿಂದ ಕನ್ನಡಿಗರನ್ನು ಸಂಘಟಿಸುವ ಕೆಲಸ ನಡೆಯುತ್ತಿತ್ತು. ಇದೇ ಸಂದರ್ಭದಲ್ಲಿ ಭಿನ್ನವಾಗಿ ಆಲೋಚಿಸುತ್ತಿದ್ದ ಕನ್ನಡದ ಕಾರ್ಯಕರ್ತರು ಬೇರೆ ವೇದಿಕೆಗಳ ಮೂಲಕ ಕನ್ನಡದ ಸಂಘಟನೆಗಳನ್ನು ಕಟ್ಟಿಕೊಂಡು ಚಳವಳಿಯನ್ನು ಮುನ್ನಡೆಸುವ ಕಡೆಗೆ ಗಮನಹರಿಸಿದ್ದು ಉಂಟು. 'ಕನ್ನಡ ಯುವಜನ ಸಭಾ'ದ ಕೋಣಂದೂರು ಲಿಂಗಪ್ಪ ಮತ್ತು ಅವರ ಸಂಗಡಿಗರು 'ಸಂಯುಕ್ತ ರಂಗ' ಚಳವಳಿಯು ಪ್ರಧಾನ ಧಾರೆಗೆ ಬರುವ ವೇಳೆಗೆ ಅದರಿಂದ ಹಿಂದಕ್ಕೆ ಸರಿದರು. ಇಲ್ಲಿ ಅ.ನ.ಕೃ ಮತ್ತು ಕೋಣಂದೂರು ಅವರುಗಳ ನಡುವಿನ ಕೆಲವು ಭಿನ್ನಾಭಿಪ್ರಾಯಗಳು ಕೆಲಸ ಮಾಡದೆ ಇಲ್ಲ. ಇದರ ಜೊತೆಗೆ 'ಸಭಾ'ದ ಕಾರ್ಯಕರ್ತರ ಗಮನಕ್ಕೆ ತರದೆಯೇ ಏಕಾಏಕಿ 'ಕನ್ನಡ ಯುವಜನ ಪತ್ರಿಕೆ'ಯನ್ನು ಹೊರಡಿಸಲಾಯಿತು. ಈ ಪತ್ರಿಕೆಯ ಸಂಪಾದಕರು ಮ. ರಾಮಮೂರ್ತಿ ಅವರೆಂದು ಘೋಷಿಸಿದ್ದು ಹೆಚ್ಚಿನ ಅಸಮಾಧಾನವನ್ನು ಉಂಟುಮಾಡಿತ್ತು. ಆದರೂ ಕನ್ನಡಿಗರ ಒಗ್ಗಟ್ಟಿನ ದೃಷ್ಟಿಯಿಂದ 'ಯುವಜನ ಸಭಾ'ದವರು 'ಸಂಯುಕ್ತ ರಂಗ'ದವರೊಂದಿಗೆ ಕೆಲವು ಕನ್ನಡದ ಸಮಸ್ಯೆಗಳಿಗೆ ಪ್ರತಿಕ್ರಿಯಿಸುತ್ತಿದ್ದರು. ಆದರೆ ನವೆಂಬರ್ ೧ರ ರಾಜ್ಯೋತ್ಸವವನ್ನು 'ಸಭಾ'ದ ಕಾರ್ಯಕರ್ತರು 'ನಾಡಹಬ್ಬ'ದ ಹೆಸರಿನಲ್ಲಿ ಭಿನ್ನವಾಗಿ ಆಚರಿಸಿದ್ದು ಗಮನಾರ್ಹ ಸಂಗತಿ.

'ಕಾಂಚಿ ತಲೈವನ್' ಚಲನಚಿತ್ರದ ವಿರುದ್ಧ ನಡೆದ ಗಲಾಟೆಗಳ ನಂತರ ಅ.ನ.ಕೃ ಅವರು ಚಳವಳಿಯಿಂದ ಹಿಂದಕ್ಕೆ ಸರಿದರು. ಆದರೆ ಈ ನಿಲುವಿಗೆ ಆ ಘಟನೆಯೊಂದೇ ಕಾರಣವಲ್ಲ. ಬದಲಾಗಿ ಅದು ಒಂದು ನೆಪ ಮಾತ್ರ. ಮುಖ್ಯವಾಗಿ ರಾಜಕಾರಣಿಗಳ ವ್ಯವಸ್ಥಿತವಾದ ಪಿತೂರಿ, ಜಾತೀಯತೆಯ ...ಎಣ್ಣಗಳನ್ನು ಹಚ್ಚುವ ಧೋರಣೆಗಳಿಂದ ಅ.ನ.ಕೃ ಅವರು ನೊಂದುಕೊಂಡಿದ್ದರು. ಅದರಲ್ಲೂ ಕಾಂಗ್ರೆಸ್ಸಿಗರಲ್ಲಿನ ಕನ್ನಡ ವಿರೋಧಿ ಧೋರಣೆಗಳು

ಅವರಿಗೆ ಹೆಚ್ಚಿನ ಅಸಮಾಧಾನವನ್ನು ಉಂಟು ಮಾಡಿದ್ದವು. ಇದಕ್ಕೆ ಅವರು ಕಟುವಾಗಿ ವಿರೋಧಿಸದೆ ಇರಲಿಲ್ಲ.[೧] ಅ.ನ.ಕೃ ಒಬ್ಬ ಬ್ರಾಹ್ಮಣ ಪಕ್ಷಪಾತಿ, ಲಿಂಗಾಯತರ ವಿರೋಧಿ ಎಂಬ ಚಿತ್ರಣವನ್ನು ಮೂಡಿಸುವ ಪ್ರಯತ್ನಗಳು ನಡೆದವು. ವಾಸ್ತವದಲ್ಲಿ ಅವರು ಎಲ್ಲ ಜಾತಿಗಳವರನ್ನು ಕನ್ನಡ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದವರು. ಆದರೆ ಅ.ನ.ಕೃ ಅವರೊಂದಿಗಿದ್ದ ರಾಮಮೂರ್ತಿ, ನಾಡಿಗೇರ ಕೃಷ್ಣರಾವ್, ತಿ. ತಾ. ಶರ್ಮ, ಮೈ. ಸು. ಶೇಷಗಿರಿರಾವ್ ಮೊದಲಾದ 'ಬ್ರಾಹ್ಮಣರ ಗುಂಪಿ'ನಿಂದಾಗಿ ಬ್ರಾಹ್ಮಣ ಪಕ್ಷಪಾತಿಗಳೆಂದು ಸಾರಲು ಅನುಕೂಲವಾಗಿತ್ತು. ಈ ಘಟ್ಟದಲ್ಲಿ ಕನ್ನಡ ಚಳವಳಿಗೂ 'ಬ್ರಾಹ್ಮಣ' ಮತ್ತು 'ಬ್ರಾಹ್ಮಣೇತರ' ತಾರತಮ್ಯಗಳು ಪ್ರವೇಶ ಪಡೆದವು. ಚಳವಳಿಯನ್ನು ಮುನ್ನಡೆಸುವ ವಿಚಾರದಲ್ಲಿ ಅ.ನ.ಕೃ ಮತ್ತು ಮ. ರಾಮಮೂರ್ತಿ ಅವರಿಬ್ಬರಲ್ಲೇ ಅನೇಕ ಭಿನ್ನಾಭಿಪ್ರಾಯಗಳು ಇದ್ದವು ಎಂಬುದು ಗಮನಿಸಬೇಕಾದ ಸಂಗತಿ. ಇವರಿಬ್ಬರೂ ಸಂಘಟಿಸಿ ತಮ್ಮೊಡನೆ ಮುನ್ನಡೆಸಿದ ಕೆಲವು ಯುವ ಕಾರ್ಯಕರ್ತರು ಇವರಿಬ್ಬರಿಗಷ್ಟೇ ಅಲ್ಲದೆ 'ಚಳವಳಿ'ಗೂ ಧಕ್ಕೆ ಬರುವಂತೆ ಮಾಡಿದರು. ಚಳವಳಿಯ ಸಂಘಟನೆಯ ವಿಚಾರದಲ್ಲಿ ಇವರಿಬ್ಬರು ನಂಬಿದ್ದ ಯುವಕರಿಂದಲೇ ಒಡಕು ಧ್ವನಿಗಳು ಹುಟ್ಟಿಕೊಳ್ಳುತ್ತವೆ ಎಂದು ಎಣಿಸಿರಲಿಲ್ಲ. ಇದಕ್ಕೆಲ್ಲ ಕೆಲವು ಜಾತೀಯ ಸಾಹಿತಿ-ರಾಜಕಾರಣಿಗಳ ಕುಮ್ಮಕ್ಕು, ಪ್ರಚಾರ ಪ್ರಿಯತೆಗಳ ಗೀಳೆ ಕಾರಣ.

### ೫.೨.೧ ಚಳವಳಿಗೆ ವಾಟಾಳ್ ನಾಗರಾಜರ ಪ್ರವೇಶ

ಅ.ನ.ಕೃ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಂದಿನ ಅಧ್ಯಕ್ಷರಾಗಿದ್ದವರು ಬಿ. ಶಿವಮೂರ್ತಿಶಾಸ್ತ್ರಿ. ಶಾಸ್ತ್ರಿಗಳ ಬಗ್ಗೆ ಸಣ್ಣ-ಪುಟ್ಟ ಕೀಟಲೆ, ವ್ಯಂಗ್ಯಗಳನ್ನು ಮಾಡಿದ್ದ ಅ.ನ.ಕೃ ಅವರು ವೈಯಕ್ತಿಕವಾಗಿ ದ್ವೇಷಿಸುವಷ್ಟು ಸಣ್ಣತನದವರಾಗಿರಲಿಲ್ಲ.[೨] ಶಾಸ್ತ್ರಿಗಳಿಗೆ ಸಭೆ, ಸಮಾರಂಭ, ಚಳವಳಿಗಳಲ್ಲಿ ಭಾಷಣಮಾಡುವ ಗೀಳು ಹೆಚ್ಚು ಇತ್ತು. ಆದರೆ ಅವರಿಗೆ ಈ ವೇದಿಕೆಗಳಲ್ಲಿ (ಚಳವಳಿಗಳಲ್ಲಿ) ಅಷ್ಟೇನು ಅವಕಾಶಗಳು ದೊರೆಯುತ್ತಿರಲಿಲ್ಲ. ಈ ಬಗ್ಗೆ ಅವರಿಗೆ ಹೆಚ್ಚಿನ ಅಸಮಾಧಾನ ಇತ್ತು. ಆದರೆ ಜನರಿಗೆ ಶಾಸ್ತ್ರಿಗಳಿಗಿಂತ ಅ.ನ.ಕೃ ಅವರ ಭಾಷಣ, ಮಾತುಗಾರಿಕೆ ಹೆಚ್ಚು ಪ್ರಿಯವಾಗಿದ್ದವು. ಈ ಜನಪ್ರಿಯತೆಯನ್ನು ತಮ್ಮದನ್ನಾಗಿಸಿಕೊಳ್ಳುವಲ್ಲಿ ಪ್ರಯತ್ನಗಳು ನಡೆಯದಿರಲಿಲ್ಲ. ಇದರ ಪರಿಣಾಮವಾಗಿ ಜಾತೀಯತೆಯ ಮೊದಲ ಬೀಜ ಕನ್ನಡ ಚಳವಳಿಯಲ್ಲಿ ಅಂಕುರಿಸುವಂತೆ ಆಯಿತು. ಲಿಂಗಾಯತರ ಪ್ರಾತಿನಿಧ್ಯವನ್ನು ಬ್ರಾಹ್ಮಣರ (ಚಳವಳಿಗಾರರ) ನಡುವೆ ಪ್ರತಿಷ್ಠಾಪಿಸುವ ಹುನ್ನಾರಗಳು ನಡೆದವು. ಅದರ ಪರಿಣಾಮವಾಗಿಯೆ ಶಾಸ್ತ್ರಿಗಳು ವಾಟಾಳ್ ನಾಗರಾಜ್ ಅವರನ್ನು ಚಳವಳಿಗೆ ತಮ್ಮ ಪ್ರತಿನಿಧಿಯನ್ನಾಗಿ ತಂದರು ಎಂಬ ಗುಮಾನಿಗಳಿವೆ.[೩]

ವಾಟಾಳ್ ನಾಗರಾಜ್ ಅವರು ಸಹ ಆರಂಭದಲ್ಲಿ ತಮ್ಮ ಸಂಘಟನಾ ಚತುರತೆಯಿಂದ ಕನ್ನಡದ ಸಮಸ್ಯೆಗಳಿಗೆ ಸ್ಪಂದಿಸಿ, ಭರವಸೆ ಮೂಡಿಸಿದ್ದರು. ಅ.ನ.ಕೃ ಅವರು ವಾಟಾಳರಿಗೆ ಕೆಲವು ಸಭೆ, ಸಮಾರಂಭ, ಚಳವಳಿಗಳನ್ನು ವ್ಯವಸ್ಥೆ ಮಾಡುವ ಮುಂದಾಳ್ತನವನ್ನು ವಹಿಸಿಕೊಡುತ್ತಿದ್ದುದು ಉಂಟು. ಇಂಥ ಅವಕಾಶಗಳನ್ನು ಉಪಯೋಗಿಸಿ ಕೊಂಡು ವಾಟಾಳರು ಶಿವಮೂರ್ತಿಶಾಸ್ತ್ರಿಗಳ ಭಾಷಣಗಳನ್ನು ಆಳವಡಿಸುತ್ತಿದ್ದರು. ಅ.ನ.ಕೃ ಅವರಿಗೆ

ವಾಟಾಳರ ಬಗ್ಗೆ ಆರಂಭದಲ್ಲಿ ಅಂಥ ಗುಮಾನಿಗಳೇನು ಬಂದಿರಲಿಲ್ಲ. ಅವರು ಜಾತಿಯ ಹಿನ್ನೆಲೆಯಲ್ಲಿನ ಪಿತೂರಿಗಳ ಬಗ್ಗೆ ಹೆಚ್ಚು ಗಮನ ಹರಿಸಿರಲಿಲ್ಲ. ಆದರೆ ಕ್ರಮೇಣ ಕೆಲವು ಗುಮಾನಿ-ಶಂಕೆಗಳು ಹುಟ್ಟಿಕೊಳ್ಳಲು ಉದಾಹರಣೆಗಳು ದೊರೆತವು. ಅಂದಿನ ಮುಖ್ಯಮಂತ್ರಿಗಳಾಗಿದ್ದ (ಲಿಂಗಾಯತ) ಎಸ್. ನಿಜಲಿಂಗಪ್ಪನವರು ತಮ್ಮ ಸಚಿವ ಸಂಪುಟದಲ್ಲಿ ಸದಸ್ಯರಾಗಿದ್ದ ಎಸ್. ಆರ್. ಕಂಠಿ ಮೂಲಕ ವಾಟಾಳರಿಗೆ ಚಳವಳಿಯಲ್ಲಿ ಪ್ರೋತ್ಸಾಹ ಕೊಡುತ್ತಿದ್ದುದು ಅನುಮಾನಗಳಿಗೆ ಎಡೆಮಾಡಿಕೊಟ್ಟಿತು. ಅಂದು ಕನ್ನಡ ಚಳವಳಿಯಲ್ಲಿದ್ದ ಬ್ರಾಹ್ಮಣ ಲೇಖಕರ ಪ್ರಭಾವವನ್ನು ಕಡಿಮೆ ಮಾಡುವುದೇ ಇವರೆಲ್ಲರ (ಲಿಂಗಾಯತರ) ಉದ್ದೇಶವಾಗಿತ್ತು ಎನ್ನಲಾಗಿದೆ.[೪] 'ಕನ್ನಡವೇ ಜಾತಿ' ಎಂದು ತಿಳಿದಿದ್ದ ತಮ್ಮನ್ನು 'ಜಾತಿವಾದಿ'ಯೆಂದು ಗುರುತಿಸಲು ಹೊರಟ ಇಂಥವರ ಪ್ರಯತ್ನಗಳನ್ನು ಕಂಡು ಅ.ನ.ಕೃ ನೊಂದುಕೊಂಡರು. ಈ ಎಲ್ಲದರ ಹಿನ್ನೆಲೆಯಲ್ಲಿ ಅ.ನ.ಕೃ ಅವರು ಚಳವಳಿಯಿಂದ ಹಿಂದಕ್ಕೆ ಸರಿಯುವಂತೆ ಆಯಿತು.

ಕನ್ನಡ ಚಳವಳಿಯನ್ನು ಮುನ್ನಡೆಸುವ ಎಲ್ಲ ರೀತಿಯ ಚಾಕಚಕ್ಯತೆ, ಸಂಘಟನಾ ಶಕ್ತಿ ಮ. ರಾಮಮೂರ್ತಿ ಅವರಲ್ಲಿಯೂ ಇತ್ತು. ಹೀಗಾಗಿ ಅ.ನ.ಕೃ ಹಿಂದೆ ಸರಿದುದರ ಕೊರತೆಯನ್ನು ಇವರು ತುಂಬಿಕೊಟ್ಟರು. ಆದರೆ ಇತರರ ಜಾತಿವಾದಿ ಧೋರಣೆಗಳು, ರಾಜಕಾರಣದ ಆಮಿಷಗಳು ರಾಮಮೂರ್ತಿ ಅವರನ್ನು ಸಹ ಕಾಡದೆ ಬಿಟ್ಟಿರಲಿಲ್ಲ. ವಾಟಾಳ್ ನಾಗರಾಜ್, ಅ. ಸಂಜೀವಪ್ಪ ಮೊದಲಾದವರು ಕನ್ನಡ ಚಳವಳಿಯಲ್ಲಿ ಕೆಲವು ದಿನ ರಾಮಮೂರ್ತಿ ಅವರೊಂದಿಗೆ ಮುಂದುವರೆದರು. ಆದರೆ ಈ ಮುಂದುವರಿಕೆ ಪ್ರತ್ಯೇಕತೆಯನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಸಾಗಿತ್ತು.

### ೫.೨.೨ ಚಳವಳಿಯಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರ ಗುಂಪುಗಳು

೧೯೬೫ರ ಆರಂಭದ ವೇಳೆಗೆ ವಾಟಾಳ್ ನಾಗರಾಜ್, ಅ. ಸಂಜೀವಪ್ಪ ಮೊದಲಾದವರು ಬೆಂಗಳೂರಿನಲ್ಲಿನ ತಮಿಳರ ಅತಿಯಾದ ದೌರ್ಜನ್ಯಗಳನ್ನು ಹತ್ತಿಕ್ಕಲು ವಿಭಿನ್ನವಾದ ಕಾರ್ಯಕ್ರಮಗಳನ್ನು ಯೋಜಿಸಿದರು. ಬೆಂಗಳೂರಿನ ಗಲ್ಲಿ-ಗಲ್ಲಿಗೂ, ಬಡಾವಣೆಗಳಿಗೂ ತೆರಳಿ ಕನ್ನಡಿಗರನ್ನು ಸಂಧಿಸುವ ಕೆಲಸ ಆರಂಭ ಆಯಿತು. ಚಿಕ್ಕಪೇಟೆ, ಚಾಮರಾಜಪೇಟೆ ಇವರುಗಳ ಕಾರ್ಯಕ್ಷೇತ್ರಗಳು. ಈ ಕ್ಷೇತ್ರಗಳನ್ನು ಬಿಟ್ಟು ಎಲ್ಲೆಡೆಗೂ ಸಂಚರಿಸಿದರು. ಆ ಮೂಲಕ ಚಿತ್ರಮಂದಿರ, ಹೋಟೇಲು ಯುವಕರು, ಆಟೋ-ರಿಕ್ಷಾ ಡ್ರೈವರುಗಳು, ಸಾರಿಗೆ ಸಂಸ್ಥೆಯ ಸಿಬ್ಬಂದಿ, ಖಾಸಗಿ ಸಂಘ-ಸಂಸ್ಥೆಗಳಲ್ಲಿನ ಉತ್ಸಾಹಿ ತರುಣರನ್ನೆಲ್ಲ ಒಗ್ಗೂಡಿಸಲಾಯಿತು. ಚಿತ್ರ ಮಂದಿರಗಳಲ್ಲಿ ಕನ್ನಡ ಚಿತ್ರಗಳಿಗೆ ಆದ್ಯತೆ, ನವೆಂಬರ್‌ನ ರಾಜ್ಯೋತ್ಸವದ ತಿಂಗಳಿನಲ್ಲಿ ಕನ್ನಡೇತರ ಸಿನಿಮಾಗಳ ಪ್ರದರ್ಶನಕ್ಕೆ ವಿರೋಧ, ಕೇಂದ್ರ ಮತ್ತು ರಾಜ್ಯ ಸರ್ಕಾರಿ ಉದ್ದಿಮೆ-ಕಾರ್ಖಾನೆಗಳಲ್ಲಿ, ಖಾಸಗಿ ಸಂಘ-ಸಂಸ್ಥೆಗಳಲ್ಲಿ ಕನ್ನಡಿಗರಿಗೆ ಹೆಚ್ಚಿನ ಉದ್ಯೋಗಗಳನ್ನು ನೀಡಲು ಒತ್ತಾಯಿಸಿ ಬಂದ್, ಮೆರವಣಿಗೆ, ಧರಣಿಗಳನ್ನು ನಡೆಸುತ್ತಿದ್ದುದು ಸಾಮಾನ್ಯ ದೃಶ್ಯಗಳಾದವು. ಸಾರ್ವಜನಿಕ ಸ್ಥಳಗಳಲ್ಲಿ ಉದ್ಯಾನವನಗಳಲ್ಲಿ ನಡೆಯುವ ಮನರಂಜನಾ ಕಾರ್ಯಕ್ರಮಗಳಲ್ಲಿ ಕನ್ನಡದ ಹಾಡುಗಳನ್ನು ಮಾತ್ರ ಹಾಡಲು ಒತ್ತಾಯಿಸಿ, ಕನ್ನಡ ಕಲಾವಿದರಿಗೆ ಆದ್ಯತೆ ನೀಡಲು ಒತ್ತಡ ತರಲಾಯಿತು. ಎಲ್ಲೆಡೆ ಕನ್ನಡ ನಾಮಫಲಕಗಳನ್ನು ಮಾತ್ರ ಬರೆಸಲು ಒತ್ತಾಯಿಸಿ ಕನ್ನಡ ಚಳವಳಿಯನ್ನು

ತೀವ್ರಗೊಳಿಸಲಾಯಿತು. ಇಂಥ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮುನ್ನಡೆಸುತ್ತಿದ್ದ ಕರ್ನಾಟಕ ಸಂಯುಕ್ತ ರಂಗದಲ್ಲಿಯೇ (ಕನ್ನಡ ಚಳವಳಿಯಲ್ಲಿಯೇ) ಮ. ರಾಮಮೂರ್ತಿ ಅವರಿಗೆ ವಿರುದ್ಧವಾಗಿ ಬ್ರಾಹ್ಮಣೇತರರ ಗುಂಪೊಂದು ಪ್ರಬಲ ಆಗುತ್ತಿದ್ದುದು ಗಮನಾರ್ಹ. ಈ ಗುಂಪಿನವರಿಗೆ ವಾಟಾಳ ನಾಗರಾಜರೆ ನಾಯಕ. ಒಟ್ಟಾರೆ ಇಲ್ಲಿಂದ ಮುಂದಕ್ಕೆ ಕನ್ನಡ ಚಳವಳಿಯಲ್ಲಿಯೂ ಜಾತೀಯವಾದಂಥ 'ಬ್ರಾಹ್ಮಣ-ಬ್ರಾಹ್ಮಣೇತರ'ರ ಗುಂಪುಗಳು ಅನಾವರಣಗೊಳ್ಳಲಾರಂಭಿಸಿದವು.

### ೫.೨.೬ ಪ್ರಾದೇಶಿಕ ರಾಜಕೀಯ ಪಕ್ಷವೊಂದರ ಅಗತ್ಯತೆ

ಬೆಂಗಳೂರಿನಲ್ಲಿ ತಮಿಳು ಸಂಘಟನೆಗಳು ವಿಪುಲವಾಗಿ, ಹೆಚ್ಚು ವ್ಯಾಪಕವಾಗಿ ಹರಡಿದವು. ಕನ್ನಡದ ಪರಿಸ್ಥಿತಿಗಳು ೧೯೫೬ರಲ್ಲಿ ಇದ್ದುದಕ್ಕಿಂತಲೂ ೧೯೬೫ರ ವೇಳೆಗೆ ಚಳವಳಿಗಳ ದೆಸೆಯಿಂದಾಗಿ ಸಾಕಷ್ಟು ಪ್ರಗತಿ ಕಂಡಿತ್ತು. ಆದರೆ ನಿರೀಕ್ಷಿತ ಗುರಿ-ಆಶಯಗಳನ್ನು ಸಾಧಿಸಲು ಆಗಿರಲಿಲ್ಲ. ಕನ್ನಡ ಸಂಘಟನೆಗಳಲ್ಲಿನ ಅನೇಕರು ತಮ್ಮ ತಮ್ಮಲ್ಲಿಯೇ ವೈಯಕ್ತಿಕವಾಗಿ ಕಾದಾಡಲು ಆರಂಭಿಸಿದ್ದು ಬೇರೆ ಆಯಾಮಗಳ ಸೃಷ್ಟಿಗೆ ಎಡೆಮಾಡಿಕೊಟ್ಟಿತು. ತಮಿಳು ನಾಡಿನಲ್ಲಿ ಆದ ಡಿ.ಎಂ.ಕೆ ಪಕ್ಷದಲ್ಲಿನ ಒಳ ಜಗಳಗಳಿಂದಾಗಿ 'ಡಿ.ಎಂ.ಕೆ' ಮತ್ತು 'ಡಿ.ಕೆ' ಎಂಬ ವಿಂಗಡನೆಗೆ ಕಾರಣವಾಗಿದ್ದವು. ಈ ಅಂತಃಕಲಹಗಳು ಬೆಂಗಳೂರಿನ ತಮಿಳರಲ್ಲೂ ಕಾಣಿಸಿಕೊಳ್ಳದೆ ಇರಲಿಲ್ಲ. ಇದರ ಪರಿಣಾಮವಾಗಿ ಎರಡು ರೀತಿಯ ತಮಿಳು ಬಾವುಟಗಳು ಹಾರಾಡತೊಡಗಿದವು. ಆಂತರಿಕ ಕಚ್ಚಾಟಗಳು ಹಲವಿದ್ದರೂ ಸಂಘಟನೆ ವಿಚಾರದಲ್ಲಿ ತಮಿಳರು ಭಾಷಿಕವಾಗಿ ಒಂದಾಗುತ್ತಿದ್ದರು. ಆದರೆ ಕನ್ನಡಿಗರಿಗಲ್ಲಿ ಇಂಥ ಒಗ್ಗಟ್ಟಿಗೆ ಕುಂದುಂಟಾಗುವ ಎಲ್ಲ ಲಕ್ಷಣಗಳೂ ಕಾಣಿಸಿಕೊಂಡಿದ್ದವು. ತಮಿಳುನಾಡಿನಲ್ಲಿ ಆಗುತ್ತಿದ್ದ ಭಾಷಿಕವಾದ ಬದಲಾವಣೆ ಪ್ರತಿಕ್ರಿಯೆಗಳನ್ನು ಕನ್ನಡ ಚಳವಳಿಗಾರರು ಗಮನಿಸದೆ ಇರಲಿಲ್ಲ. ತಮಿಳರು ತಮ್ಮ ಭಾಷೆ, ಸಾಹಿತ್ಯ, ಚರಿತ್ರೆ, ಸಂಸ್ಕೃತಿಗಳನ್ನು ಜನರಲ್ಲಿ ಮೂಡಿಸಲು, ಅಭಿಮಾನ ಪಟ್ಟುಕೊಳ್ಳುವಂತೆ ಮಾಡಲು ರಾಜಕೀಯವಾದ ಬೆಂಬಲದ ಅವಶ್ಯಕತೆಯನ್ನು ಮನಗಂಡಿದ್ದರು. ಹೀಗಾಗಿ ಅಲ್ಲಿ ಡಿ.ಎಂ.ಕೆ ಮತ್ತು ಡಿ.ಕೆ ಪಕ್ಷಗಳು ಸ್ಪರ್ಧಾತ್ಮಕವಾಗಿ ಕೆಲಸ ಮಾಡುವಂತೆ ಆಗಿತ್ತು. ಬೆಂಗಳೂರಿನ ತಮಿಳರಲ್ಲೂ ಈ ಧೋರಣೆಗಳು ಕಾಣಿಸಿ ಕೊಳ್ಳುತ್ತಿದ್ದವು. ಇದನ್ನು ಮನಗಂಡ ಮ. ರಾಮಮೂರ್ತಿ, ವಾಟಾಳ್ ನಾಗರಾಜ ಮೊದಲಾದವರು ಕನ್ನಡಿಗರಿಗೂ ರಾಜ್ಯದಲ್ಲಿ ಪ್ರಾದೇಶಿಕ ರಾಜಕೀಯ ಪಕ್ಷವೊಂದರ ಅಗತ್ಯತೆ ಇದೆ ಎಂಬುದನ್ನು ಸಮಾಲೋಚಿಸುವಂತೆ ಆಯಿತು.

ಕನ್ನಡ-ಕನ್ನಡಿಗ-ಕರ್ನಾಟಕಗಳ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸರ್ಕಾರವನ್ನು ಅರಸಿ ಹೋಗುತ್ತಿದ್ದ ಚಳವಳಿಗಾರರಿಗೆ ಅನೇಕ ವೇಳೆ ಅಸಮಧಾನವಾಗಿದ್ದೇ ಹೆಚ್ಚು. ಅನುಕೂಲಗಳಾಗಿದ್ದು ಬಹಳ ಕಡಿಮೆ. ರಾಷ್ಟ್ರೀಯ ಪಕ್ಷಗಳಂತು (ಕಾಂಗ್ರೆಸ್ ಇತ್ಯಾದಿ) ಸ್ಥಳೀಯ ಸಮಸ್ಯೆಗಳನ್ನು ಪರಿಗಣಿಸಿ ಗೆದ್ದು ಬರುವುದು ಸುಲಭವಲ್ಲವೆಂದು ಅರಿತು ಕೊಂಡಿದ್ದವು. ಏಕೆಂದರೆ ಈ ಪಕ್ಷಗಳಿಗೆ ಕನ್ನಡಿಗರ ಮತಗಳು ಮಾತ್ರ ಬೇಕಿರದೆ ಅವರ ಜೊತೆಗೆ ಕನ್ನಡೇತರರವು ಬೇಕಿತ್ತು. ಹೀಗಾಗಿ 'ಕನ್ನಡ'ಕ್ಕೆ ಸ್ಪಂದಿಸುವ ಕನ್ನಡಿಗರದೆ ಆದ ಪ್ರಾದೇಶಿಕ ಪಕ್ಷವೊಂದರ ಜರೂರು ತೀವ್ರವಾಗಿ ಕಾಣಿಸಿಕೊಂಡಿತು. ತಮ್ಮ ಪ್ರತಿನಿಧಿಗಳೇ ಸರ್ಕಾರವನ್ನು ರಚಿಸಿದಲ್ಲಿ ನೇರವಾಗಿ ಕನ್ನಡದ ಕೆಲಸಗಳನ್ನು ಮಾಡಿಸಲು ಸುಲಭಸಾಧ್ಯ

ಎಂಬುದು ಇವರೆಲ್ಲರ ಆಲೋಚನೆ ಆಗಿತ್ತು. ಈ ನಿಟ್ಟಿನಲ್ಲಿ ಕನ್ನಡದ ಕಾರ್ಯಕರ್ತರ ಚಟುವಟಿಕೆಗಳನ್ನು ಆರಂಭಿಸಿದರು.

**೫.೨.೪ ಚಳವಳಿಯಲ್ಲಿ ಸೈದ್ಧಾಂತಿಕ ಒಡಕು**

ಕನ್ನಡಿಗರ ರಾಜಕೀಯ ಪಕ್ಷವೊಂದು ಅಸ್ತಿತ್ವಕ್ಕೆ ಬರುವ ಮುನ್ನವೆ ೧೯೬೫ರಲ್ಲಿ ಚಳವಳಿಗಾರರಲ್ಲಿ ಎರಡು ಗುಂಪುಗಳಾದವು. ತಮಿಳರ ದೌರ್ಜನ್ಯಗಳನ್ನು ತಡೆಯಲು ಉಗ್ರರೂಪದಲ್ಲಿ ಚಳವಳಿ ಆರಂಭಿಸಲು ವಾಟಾಳ್ ನಾಗರಾಜ್, ಅ. ಸಂಜೀವಪ್ಪ, ಸ. ಕೃ. ಸಂಪಂಗಿ, ಜಿ. ನಾರಾಯಣ ಮೊದಲಾದವರು ಹಾತೊರೆದರು. ಈ ದಿಸೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಗಮನ ಸೆಳೆಯುವುದು, ಪರಿಹಾರಗಳನ್ನು ಕಂಡುಕೊಳ್ಳುವುದು ಅನಿವಾರ್ಯ ಅನ್ನಿಸಿತು. ಅದರಂತೆ ಕನ್ನಡಿಗರ ಸಾರ್ವಜನಿಕ ಸಭೆಯನ್ನು ಕರೆದದ್ದು ಕರ್ನಾಟಕ ಸಂಯುಕ್ತ ರಂಗ. ಈ ಸಭೆಯು ದೊಡ್ಡ ಮೆರವಣಿಗೆಯೊಂದಿಗೆ ನಾಗಪ್ಪ ಪಾರ್ಕಿನಲ್ಲಿ ಸಮಾವೇಶಗೊಂಡಿತು. ಕನ್ನಡ ಚಳವಳಿಗೆ ಹೊಸ ರೂಪ ಬರುತ್ತದೆಯೆಂಬುದು ಎಲ್ಲ ಕಾರ್ಯಕರ್ತರ ನಿರೀಕ್ಷೆ. ಹೆಚ್ಚಿನ ಸಂಖ್ಯೆಯಲ್ಲಿ ಜನ ಸೇರಿದ್ದ ಈ ಸಮಾವೇಶದಲ್ಲಿ ಆದದ್ದೇ ಬೇರೆ. ವಾಟಾಳ್ ನಾಗರಾಜ ಅವರು ಮ. ರಾಮಮೂರ್ತಿ ಅವರೊಂದಿಗೆ ಚಳವಳಿ ಮತ್ತು ರಾಜಕೀಯ ನೆಲೆಗಳಲ್ಲಿ ಸೈದ್ಧಾಂತಿಕವಾಗಿ ವಿರೋಧವನ್ನು ವ್ಯಕ್ತಪಡಿಸಿದರು. ಚಳವಳಿಯನ್ನು ಭಿನ್ನ ರೀತಿಯಲ್ಲಿ ನಡೆಸಿಕೊಂಡು ಹೋಗುವುದರ ಬಗ್ಗೆ ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡವು. ಈ ವೇಳೆಗಾಗಲೇ ವಾಟಾಳರು ಸಾಕಷ್ಟು ಜನಪ್ರಿಯರಾಗಿದ್ದರು. ಅಲ್ಲದೆ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡ ಕಾರ್ಯಕರ್ತರ ಬೆಂಬಲವನ್ನು ಗಳಿಸಿದ್ದುದು ಉಂಟು. ಕನ್ನಡ ಚಳವಳಿಯನ್ನು ಒಡೆಯುವುದು ಬೇಡವೆಂದು ರಾಮಮೂರ್ತಿಗಳು ಕೇಳಿಕೊಂಡಿದ್ದು ಪ್ರಯೋಜನಕ್ಕೆ ಬರಲಿಲ್ಲ. ಸಭೆಯಲ್ಲಿಯೇ ವಾಟಾಳರು ತಮಗೂ 'ಕರ್ನಾಟಕ ಸಂಯುಕ್ತರಂಗ'ದ ಚಳವಳಿಗಳಿಗೂ ಇನ್ನೂ ಮುಂದೆ ಯಾವುದೇ ಥರದ ಸಂಬಂಧ ಇಲ್ಲವೆಂದು ಘೋಷಿಸಿದರು. ಇನ್ನು ಮುಂದೆ ತಮ್ಮ ನೇತೃತ್ವದಲ್ಲಿ ನಡೆಯುವ ಕನ್ನಡ ಚಳವಳಿಯು ಭಿನ್ನವಾಗಿಯೂ, ಉಗ್ರವಾಗಿಯೂ ಇರುತ್ತದೆಯೆಂದು ಪತ್ರಿಕಾ ಹೇಳಿಕೆಗಳನ್ನು ನೀಡಲಾಯಿತು. ಕನ್ನಡ ಚಳವಳಿಯ ಪ್ರಕ್ರಿಯೆಯಲ್ಲಿ ಅ.ನ.ಕೃ ಅವರಿಗಿಂತ ಮ. ರಾಮಮೂರ್ತಿ ಭಿನ್ನವೆಂದು ಗುರುತಿಸಿಕೊಂಡಿದ್ದರು. ಆದರೆ ಮ. ರಾಮಮೂರ್ತಿ ಅವರಿಗಿಂತಲೂ ಉಗ್ರವಾಗಿ, ವ್ಯಾಪಕವಾಗಿ ಚಳವಳಿಯನ್ನು ಮುನ್ನಡೆಸಲು ಹೊರಟವರು ವಾಟಾಳ್ ನಾಗರಾಜ್. ಈ ರೀತಿಯ ಭಿನ್ನತೆಗಳೊಂದಿಗೆ ಚಳವಳಿ ನಾಯಕರು ಸಂಘಟನೆಗಳನ್ನು ಛಿದ್ರಗೊಳಿಸುತ್ತಾ ಹೋದದ್ದು ಗಮನಾರ್ಹ.

**೫.೨.೫ ಎರಡು ಸ್ಥಳಗಳಲ್ಲಿ ರಾಜ್ಯೋತ್ಸವ ಆಚರಣೆ**

ಕರ್ನಾಟಕ ಸಂಯುಕ್ತರಂಗದವರು ಎಂದಿನಂತೆ ೧೯೬೫ರ ನವೆಂಬರ್ ೧ಕ್ಕೆ ರಾಜ್ಯೋತ್ಸವವನ್ನು ಅದ್ದೂರಿಯಾಗಿ ಆಚರಿಸಲು ಸಿದ್ಧತೆಗಳನ್ನು ನಡೆಸಿದರು. ಮ. ರಾಮಮೂರ್ತಿ ಅವರ ನೇತೃತ್ವದ ಮೂರನೆಯ ರಾಜ್ಯೋತ್ಸವ ಇದಾಗಿತ್ತು. ಭಿನ್ನಾಭಿಪ್ರಾಯದಿಂದ ಹೊರಗಿದ್ದ ವಾಟಾಳರನ್ನು ಈ ರಾಜ್ಯೋತ್ಸವದಲ್ಲಿ ಸೇರಿಸಿಕೊಳ್ಳುವುದು ಮ. ರಾಮಮೂರ್ತಿಯವರಿಗೆ ಅನಿವಾರ್ಯ ಅನಿಸಿತು. ಈ ಬಗ್ಗೆ ಅವರ ಮನವೊಲಿಸಲು

ಗುಬ್ಬಿ ವೀರಣ್ಣ ರಂಗಮಂದಿರದಲ್ಲಿ ವಾಟಾಳ್ ಮತ್ತು ಸಂಗಡಿಗರನ್ನು ಸಭೆಗೆ ಹಾಜರಾಗುವಂತೆ ಕೇಳಿಕೊಂಡರು. ಆದರೆ ವಾಟಾಳರು ಈ ಸಭೆಗೆ ಹಾಜರಾಗಲಿಲ್ಲ. ಬದಲಾಗಿ ತಾವು ಪ್ರತ್ಯೇಕವಾಗಿ ರಾಜ್ಯೋತ್ಸವವನ್ನು ಆಚರಿಸುವುದಾಗಿ ಹೇಳಿಕೆ ಕೊಟ್ಟರು. ಕನ್ನಡ ಚಳವಳಿ ಮತ್ತು ಅನೇಕ ಚಳವಳಿಗಾರರು ವಾಟಾಳರ ಹೇಳಿಕೆಯಿಂದಾಗಿ ರಾಜ್ಯೋತ್ಸವಕ್ಕೆ ಮೊದಲೇ ಎರಡು ಗುಂಪುಗಳಲ್ಲಿ ಛಿದ್ರಗೊಂಡರು. ಅಂತೆಯೇ ಎರಡು ಕಡೆಗಳಲ್ಲಿ ರಾಜ್ಯೋತ್ಸವ ಆಚರಣೆಗೆ ಬಂದಿತು. ಮ. ರಾಮಮೂರ್ತಿ ಅವರ ನೇತೃತ್ವದಲ್ಲಿ ಸುಭಾಷ್ ನಗರದಲ್ಲೂ, ವಾಟಾಳರು ಮೈಸೂರು ಬ್ಯಾಂಕಿನ ಬಳಿಯೂ ಆಚರಿಸಿದ್ದು ಉಂಟು. ಇಂಥ ಪ್ರತ್ಯೇಕತೆಯ ಘೋರಣೆಗಳು, ಚಟುವಟಿಕೆಗಳು ಕನ್ನಡೇತರರಿಗೆ, ಅದರಲ್ಲೂ ತಮಿಳರಿಗೆ ಹಾಗೂ ಅವರ ಸಂಘಟನೆಗಳಿಗೆ ಅನುಕೂಲವಾದವು. ಇವರುಗಳು ತಮಿಳು ಬಾವುಟಗಳನ್ನು ಹಾರಿಸಿ ಸಭೆ-ಸಮಾರಂಭಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಯೋಜಿಸ ಲಾರಂಭಿಸಿದರು. ರಾಜಕೀಯವಾಗಿ ಡಿ.ಎಂ.ಕೆ ಪಕ್ಷವನ್ನು ಅಧಿಕಾರಕ್ಕೆ (ಬೆಂಗಳೂರಿನಲ್ಲಿ) ತರುವುದು ತಮಿಳರ ಮುಖ್ಯ ಆಶಯವಾಗಿತ್ತು.

### ೫.೨.೬ ತಮಿಳರಿಂದ ಹಿಂಸಾತ್ಮಕ ಕೃತ್ಯಗಳು

ಮೈಕೋ ಮತ್ತು ಇತರೆ ಕಾರ್ಖಾನೆಗಳಲ್ಲಿ ತಮಿಳರು ಕನ್ನಡಿಗರನ್ನು ಮತ್ತೆ ಹಿಂಸೆ ನೀಡಲು ಆರಂಭಿಸಿದ್ದರು. ಅಲ್ಲಿನ 'ಕನ್ನಡ ಸಂಘ' ಮತ್ತು ಕಾರ್ಯಕರ್ತರ ಮೇಲೆ ಸುಳ್ಳು ದೂರಗಳನ್ನು ನೀಡಿ ಬಂಧಿಸಲಾಯಿತು. ವಿಷಯವನ್ನು ತಿಳಿದ ರಾಮಮೂರ್ತಿ ಅವರು ತಮ್ಮಲ್ಲಿ ಹಣವಿಲ್ಲದಿದ್ದ ಕಾರಣದಿಂದ ಮಡಿವಾಳ ಪೋಲೀಸ್ ಠಾಣೆಗೆ ನಡೆದುಕೊಂಡು ಬಂದರು. ಕಮೀಷನರ್ ಚಾಂಡಿಯವರನ್ನು ಕನ್ನಡ ಕಾರ್ಯಕರ್ತರ ಬಿಡುಗಡೆಗಾಗಿ ವಿನಂತಿಸಲಾಯಿತು. ಈ ಸಂದರ್ಭದಲ್ಲಿ ಬಿ. ಡಿ. ಜತ್ತಿ ಅವರು ಜಾಮೀನು ನೀಡಿದ್ದು ಉಂಟು. ತಮಿಳರು ವಾಸಿಸುವ ಅನೇಕ ಬಡಾವಣೆಗಳಲ್ಲಿ ಕನ್ನಡಿಗರ ಮೇಲೆ ಹಲ್ಲೆಗಳು ಸಾಮಾನ್ಯವಾಗಲಾರಂಭಿಸಿದವು. ಅಂತೆಯೇ ತಮಿಳು ಬಾವುಟ (ಕೆಂಪು ಮತ್ತು ಕಪ್ಪು ಬಣ್ಣದ್ದು)ಗಳ ಹಾರಾಟವು ಹೆಚ್ಚಾಯಿತು. ಇವಕ್ಕೆಲ್ಲ ಚಳವಳಿಯಲ್ಲಾದ ಒಡಕು ಹಾಗೂ ಕನ್ನಡಿಗರ ಒಗ್ಗಟ್ಟಿನ ಕೊರತೆಯೆ ಕಾರಣ. ಕನ್ನಡಿಗರಿಗೆ ತಮ್ಮದೇ ಆದ ಬಾವುಟ ಎಂಬುದು ಇರಲಿಲ್ಲ. ಕರ್ನಾಟಕದ ಭೂಪಟ, ಭುವನೇಶ್ವರಿ ತಾಯಿ ಅಥವಾ ಗಂಡ ಬೇರುಂಡ ಚಿತ್ರಗಳಿರುವ ಬಾವುಟಗಳನ್ನು ಚಳವಳಿಗಳಲ್ಲಿ ಬಳಸಲಾಗುತ್ತಿತ್ತು. ಎಲ್ಲಿಯೂ ಏಕರೂಪತೆ ಇರಲಿಲ್ಲ. ಈ ಕೊರತೆಯನ್ನು ಹೋಗಲಾಡಿಸುವ ಸಲುವಾಗಿ ಕನ್ನಡ ಕಾರ್ಯಕರ್ತರು ತಮ್ಮ ಮುಂದಾಳುಗಳನ್ನು, ಹಿರಿಯ ಸಾಹಿತಿ-ಕಲಾವಿದರುಗಳನ್ನು ಒಂದೆಡೆ ಸೇರಲು ಸಂಘಟಿಸಿದರು. ಇದರ ಪರಿಣಾಮವೇ ೧೯೬೬ರಲ್ಲಿ ನಡೆದ 'ಅಖಿಲ ಕರ್ನಾಟಕ ಕನ್ನಡಿಗರ ಬೃಹತ್ ಸಮ್ಮೇಳನ'.

### ೫.೨.೭ ಕನ್ನಡ ಬಾವುಟದ ಸಮಸ್ಯೆ ಮತ್ತು ಚಳವಳಿ

ಕನ್ನಡ ಚಳವಳಿಗಾರರು ಹಿಂದಿನಿಂದಲೂ ಕನ್ನಡ ಬಾವುಟದ ಬಗ್ಗೆ ಅನೇಕ ಬಾರಿ ಆಲೋಚಿಸಿದ್ದರೂ ಅದು ಕಾರ್ಯರೂಪಕ್ಕೆ ಬಂದಿರಲಿಲ್ಲ. ಎರಡು ಬಣಗಳಲ್ಲಿದ್ದ ಚಳವಳಿಗಾರರನ್ನು ಒಂದು ವೇದಿಕೆಗೆ ತರುವುದು ಅಸಾಧ್ಯವಾಗಿತ್ತು. 'ಬಾವುಟ'ವನ್ನು

ಕಂಡುಕೊಳ್ಳುವ ಅನಿವಾರ್ಯತೆಯನ್ನು ಮನಗಂಡ ರಾಮಮೂರ್ತಿ ಮತ್ತು ವಾಟಾಳರ ಬಣಗಳು ಒಂದೆಡೆ ಸೇರಲು ಒಪ್ಪಿದವು. ಬೆಂಗಳೂರಿನ 'ಮೈಸೂರು ವಾಣಿಜ್ಯ ಭವನ'ದಲ್ಲಿ ಈ ಸಭೆ (ಅಖಿಲ ಕರ್ನಾಟಕ ಕನ್ನಡಿಗರ ಬೃಹತ್ ಸಮಾವೇಶ) ನಡೆಯಿತು. ಮ. ರಾಮಮೂರ್ತಿ ಅವರು ಸಭೆಯ ಅಧ್ಯಕ್ಷತೆಯನ್ನು ಹಾಗೂ ವಾಟಾಳರು ಸಭೆಯನ್ನು ಉದ್ಘಾಟಿಸುವ ಹೊಣೆಯನ್ನು ಹೊತ್ತಿದ್ದರು. ಈ ಸಭೆಯಲ್ಲಿ ರಂಗಾಚಾರ್, ಅ. ಸಂಜೀವಪ್ಪ, ಸ. ಕೃ. ಸಂಪಂಗಿ, ಬೆ. ನಿ. ಈಶ್ವರಪ್ಪ ಮೊದಲಾದವರು ಭಾಷಣಕಾರರು. ಹೆಚ್ಚಿನ ಸಂಖ್ಯೆಯಲ್ಲಿದ್ದ ಕಾರ್ಯಕರ್ತರು 'ಕನ್ನಡ ಬಾವುಟ' ಯಾವುದು ಎಂಬುದರ ಬಗ್ಗೆ ಕುತೂಹಲದಿಂದ ಕಾದು ನೋಡುವ ವಾತಾವರಣ ನಿರ್ಮಾಣ ಆಗಿತ್ತು. ಸಭೆಯಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಮಂಡಿಸುವ, ಬಾವುಟದ ರಚನೆ, ವಿನ್ಯಾಸಗಳ ಬಗ್ಗೆ ಮಾತನಾಡುವ ಮುಕ್ತತೆ ಇತ್ತು. ಎಲ್ಲರ ಅಭಿಪ್ರಾಯ, ಸೂಚನೆಗಳನ್ನು ಪರಿಗಣಿಸಿ ಕನ್ನಡದ ಬಾವುಟವೊಂದನ್ನು ಪರಿಚಯಿಸಿದ್ದು ಗಮನಾರ್ಹ. ಎರಡು ಮೂಲೆಗಳನ್ನು ಹೊಂದಿದ್ದ ಹಳದಿ ಬಣ್ಣದ (ನಿಂಬೆ ಹಣ್ಣಿನ ಬಣ್ಣ) ಬಾವುಟದ ಮಧ್ಯ ಭಾಗದಲ್ಲಿ ಇನ್ನೂ ಏಕೀಕರಣಗೊಳ್ಳಬೇಕಿದ್ದ ಕನ್ನಡ ಭೂಪ್ರದೇಶಗಳನ್ನು ಒಳಗೊಂಡ ಸಮಗ್ರ ಕರ್ನಾಟಕದ ಚಿತ್ರಣವಿರುವ ನಕ್ಷೆಯನ್ನು ರಚಿಸಲಾಗಿತ್ತು. ಈ ನಕ್ಷೆಯ ಮಧ್ಯ ಭಾಗದಲ್ಲಿ ಇದ್ದದ್ದು (ಭೂಪಟದ ಮಧ್ಯೆ) ಬೆಳೆಯುತ್ತಿರುವ ಪೈರ (ತೆನೆಯ)ನ್ನು ಬಿಂಬಿಸುವ ಚಿತ್ರ. ಸಭೆಯ ಅಧ್ಯಕ್ಷರಾದ ರಾಮಮೂರ್ತಿ ಅವರು ನಕ್ಷೆಯಲ್ಲಿ ನಮಗೆ ನೆರೆ ರಾಜ್ಯಗಳಿಂದ ಬರಬೇಕಾದ ಭಾಗಗಳನ್ನು ಪಡೆಯುವುದೇ ಸದಾ ಹೋರಾಟವೆಂದೂ, ಮಧ್ಯೆಯಿರುವ ಪೈರು ಈಗ ಬೆಳೆಯುತ್ತಿರುವ ಕನ್ನಡ ಚಳವಳಿಯ 'ಅಭಿವೃದ್ಧಿಯನ್ನು ಸಂಕೇತಿಸುತ್ತದೆ' ಎಂದು ವಿವರಣೆ ನೀಡಿದರು.[೫] ದೇವಾಲಯದ ಬಾವುಟವನ್ನು ಹೋಲುವಂತೆ ಕನ್ನಡದ ಬಾವುಟಕ್ಕೂ ಎರಡು ಮೂಲೆಗಳನ್ನು ನೀಡಿರುವುದು ಸಂಸ್ಕೃತಿಯ ಸಂಕೇತ ಎಂದು ಹೇಳಿಕೊಳ್ಳಲಾಯಿತು. ಅಂದು ಸಭೆಯಲ್ಲಿ ನಿರ್ಣಯವಾದ ಈ ಬಾವುಟವನ್ನೇ ಎಲ್ಲ ಕಾರ್ಯಕರ್ತರು ಒಕ್ಕೊರಲಿನಿಂದ ಜಯಕಾರಗಳನ್ನು ಕೂಗುವುದರೊಂದಿಗೆ ಧ್ವಜಕ್ಕೆ ವಂದಿಸಿ ಒಪ್ಪಿಕೊಂಡರು.

### ೫.೨.೮ ಮರಾಠಿಗರ ಹುನ್ನಾರಗಳು

ಕನ್ನಡದ ಬಾವುಟದಲ್ಲಿ ಕನ್ನಡ ಪ್ರದೇಶಗಳ ಸೇರ್ಪಡೆ ಕುರಿತ ಚಿತ್ರಣವನ್ನು ಬಿಂಬಿಸುವುದು, ಚಳವಳಿಯನ್ನು ಚಾಲ್ತಿಯಲ್ಲಿರುವಂತೆ ಮಾಡುವುದು ತೀರ ತುರ್ತಿನ ಸಂಗತಿ ಆಗಿತ್ತು. ಈ ತುರ್ತಿಗೆ ಚಾರಿತ್ರಿಕವಾದ ಕಾರಣ ಹಾಗೂ ಒತ್ತಡಗಳು ಇವೆ. ೧೯೬೬ರ ವೇಳೆಗಾಗಲೇ ಕರ್ನಾಟಕವು ಏಕೀಕರಣಗೊಂಡು (೧೯೫೬) ಹತ್ತು ವರುಷಗಳೇ ಕಳೆದಿದ್ದರೂ ಕನ್ನಡದ ಅನೇಕ ಭೂನೆಲೆಗಳು ತಮಗೆ ಇನ್ನೂ ಸೇರಿರಲಿಲ್ಲವೆಂಬ ಕೊರಗು ಇದ್ದೇ ಇತ್ತು. ಇದರೊಂದಿಗೆ ಹತ್ತು ವರುಷಗಳಿಂದಲೂ ಸಾಹಿತ್ಯ ಸಮ್ಮೇಳಗಳಲ್ಲಿನ ಠರಾವುಗಳು, ಸಂಘ-ಸಂಸ್ಥೆಗಳ ಒತ್ತಾಯಗಳಿಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಯಾವುದೇ ಪ್ರಗತಿದಾಯಕ ನಿರ್ಧಾರವನ್ನು ತೆಗೆದುಕೊಂಡಿರಲಿಲ್ಲ. ಈ ಮಧ್ಯೆ ಮರಾಠಿಗರು 'ಮಹಾರಾಷ್ಟ್ರ'ದ ವಿಸ್ತರಣೆಗಾಗಿ ಹಾತೊರೆಯುತ್ತಿದ್ದುದು ಆತಂಕಕ್ಕೆ ಎಡೆಮಾಡಿಕೊಟ್ಟಿತ್ತು. ಇವರು ಗೋವೆಯನ್ನು ಸೇರಿಸಿಕೊಂಡಂತೆ ಬೆಳಗಾವಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳು

ತಮಗೆ ಸೇರಬೇಕು ಎಂದು ಒತ್ತಾಯಿಸುತ್ತಿದ್ದರು. ಮರಾಠಿಗರು ಈ ಬಗ್ಗೆ ದೊಡ್ಡ ದೊಡ್ಡ ಚಳವಳಿಗಳ ಮೂಲಕ ಗಮನ ಸೆಳೆಯುವಂತೆ ಮಾಡುತ್ತಿದ್ದರು. ಎಸ್. ಬಿ. ಚವ್ಹಾಣ್‌ರಂಥ ಮರಾಠಿ ಧುರೀಣರು ಕನ್ನಡದ ಅನೇಕ ಪ್ರದೇಶಗಳ ಕಬಳಿಕೆಗೆ ಹುನ್ನಾರಗಳನ್ನು ನಡೆಸುತ್ತಿದ್ದುದು ಆತಂಕದಾಯಕವಾಗಿತ್ತು. ಮುಂಬಯಿ ನಗರದಲ್ಲಿ ಕನ್ನಡಿಗರ ಮೇಲೆ ನಡೆಯುತ್ತಿದ್ದ ಹಲ್ಲೆಗಳು ದಿನೆ ದಿನೆ ಹೆಚ್ಚಾಗತೊಡಗಿದವು. ಈ ಸನ್ನಿವೇಶದಲ್ಲಿ ಹುಟ್ಟಿಕೊಂಡದ್ದೇ ಮರಾಠಿಗರ 'ಶಿವಸೇನೆ' ಸಂಘಟನೆ. ಇದು ತೀವ್ರಗಾಮಿ ಸಂಘಟನೆಯೂ ಹೌದು. 'ಶಿವಸೇನೆ'ಯ ಬಾಳಠಾಕ್ರೆ ಮೊದಲಾದವರಿಂದ ಉತ್ತೇಜಿತರಾದ ಆಕ್ರಮಣಕಾರಿ ಮರಾಠಿಗರು ಕನ್ನಡಿಗರನ್ನು ಹಿಂಸೆ ಮಾಡಿ, ಆಸ್ತಿ-ಪಾಸ್ತಿಗಳಿಗೆ ನಷ್ಟವನ್ನುಂಟು ಮಾಡುತ್ತಿದ್ದರು.[೬] ಈ ರೀತಿಯ ಅನೇಕ ಅಂಶಗಳನ್ನು, 'ಕನ್ನಡ ಬಾವುಟ'ವನ್ನು ನಿರ್ಧರಿಸುವ ಸಂದರ್ಭದಲ್ಲಿ ಗಣನೆಗೆ ತೆಗೆದುಕೊಳ್ಳುವುದು ಅವಶ್ಯಕವಾಗಿತ್ತು.

### ೫.೨.೯ ಸಂಪೂರ್ಣ ಕರ್ನಾಟಕ ಸರ್ವಪಕ್ಷ ಸಮ್ಮೇಳನ

ಕನ್ನಡ ಬಾವುಟದ ಮಾತುಕತೆಗಳು ನಡೆಯುತ್ತಿರುವ ಸಂದರ್ಭದಲ್ಲಿ 'ಕನ್ನಡ ಯುವಜನ ಸಭಾ'ದ ಅನೇಕ ಸದಸ್ಯರು ಭಿನ್ನರೀತಿಯಲ್ಲಿ ಆಲೋಚಿಸಲು ಮುಂದಾಗಿದ್ದರು. ಇವರಿಗೆ ಆಂತರಿಕವಾದ ಕನ್ನಡದ ಆತಂಕಗಳಿಗಿಂತ ಹೊರಗಿನಿಂದ ನಮ್ಮ ಪ್ರದೇಶಗಳ ಕಬಳಿಕೆಗೆ ನಡೆಸುತ್ತಿದ್ದ ಹುನ್ನಾರಗಳನ್ನು, ಪಿತೂರಿಗಳನ್ನು ತಡೆಯುವ ನಿರ್ಣಯಗಳು ಬೇಕೆನ್ನಿಸಿದವು. ಕನ್ನಡದ ಭೂಪ್ರದೇಶಗಳನ್ನು, ಗಡಿಗಳನ್ನು ನಮ್ಮದನ್ನಾಗಿಸಿಕೊಳ್ಳುವುದರ ಕಡೆಗೆ ಕನ್ನಡಿಗರ ಗಮನ ಹರಿಸುವುದು 'ಸಭಾ'ದವರ ಆಶಯವಾಗಿತ್ತು. ಈ ನಿಟ್ಟಿನಲ್ಲಿ ಹಲವು ಪ್ರಯತ್ನಗಳು ನಡೆದವು. ಅವುಗಳಲ್ಲಿ 'ಸಂಪೂರ್ಣ ಕರ್ನಾಟಕ ಸರ್ವಪಕ್ಷ ಸಮ್ಮೇಳನ'ವೂ ಒಂದು. ಕನ್ನಡಿಗರಲ್ಲಿ ಎಚ್ಚರಿಕೆಯನ್ನು ಮೂಡಿಸುವ ಈ ಸಮ್ಮೇಳನ ನಡೆದದ್ದು ೧೯೬೬ರ ಜುಲೈ ೨೯ರಂದು. ಇದರಲ್ಲಿ ಶಾಂತವೇರಿ ಗೋಪಾಲ ಗೌಡರಾದಿಯಾಗಿ ಕೋಣಂದೂರು ಲಿಂಗಪ್ಪ, ಕೆ. ಜಿ.ಮಹೇಶ್ವರಪ್ಪ, ಜೇರಿಗೆಕಟ್ಟೆ ಬಸಪ್ಪ, ಎಸ್. ಸೂರ್ಯನಾರಾಯಣರಾವ್, ಎಚ್. ಎಸ್. ಯೋಗೇಶ್, ವೈ. ನಾಗರಾಜ, ಬಿ. ವಿಷ್ಣು ಕಕ್ಕಿಲ್ಲಾಯ, ಸಿ. ಪುಟ್ಟಸ್ವಾಮಿ, ಅ. ಸಂಜೀವಪ್ಪ, ವಿ. ಎಸ್. ಮೂರ್ತಿ, ಕೆ. ಎಚ್. ರಾಮಣ್ಣಗೌಡ, ಎಸ್. ಚೆನ್ನಯ್ಯ, ಎಚ್. ರಂಗಸ್ವಾಮಿ, ಡಾ. ಎಸ್. ಸಿದ್ಧಲಿಂಗಯ್ಯ, ಎಲ್. ಚಂದ್ರಶೇಖರ ರೆಡ್ಡಿ, ಡಾ. ಪಿ. ಕೆ. ಜವಳಿ, ಆರ್. ಅನಂತರಾಮನ್. ಬಿ. ಶಿವಮೂರ್ತಿ ಶಾಸ್ತ್ರಿ, ಎಸ್. ಶಿವಪ್ಪ, ಪ್ರೊ. ಡಿ. ಶಿವಶಂಕರ್, ಟಿ. ಸುಬ್ರಹ್ಮಣ್ಯಂ, ವಿ. ಟಿ. ಶ್ರೀನಿವಾಸನ್, ಸಿ. ಎಂ. ಆರುಮುಗಂ, ದ್ರಾವಿಡ ಮಣಿ, ಎಸ್. ಎಲ್. ಉಪಾಧ್ಯಾಯ, ಬಿ. ವಿ. ಕಕ್ಕಿಲ್ಲಾಯ, ಆಳವಂಡಿ ಶಿವಮೂರ್ತಿ ಸ್ವಾಮಿ, ಎಚ್. ಬಿ. ಶೇಷಾದ್ರಿ, ಆ. ಹಿ. ಶಿವಾನಂದ ಸ್ವಾಮಿ, ಎಲ್. ಜಿ. ಹಾವನೂರ, ಪ್ರಭುರಾಜ ಲಿಗಾಡೆ, ಶಂಕರ ಮೂಗಿ, ಕೆ.ಎಸ್.ಎಸ್. ರಾವ್, ಎಸ್. ವೆಂಕಟರಾಮ, ಡಿ. ಕೆಂಪಣ್ಣ, ಸಿ. ಎಂ. ಮಲ್ಲಯ್ಯ, ಪಿ. ವಿ. ಸದಾಶಿವಯ್ಯ, ಸೋ. ಜವರಯ್ಯ, ಡಾ. ಎ. ಎಂ. ರತ್ನಂ, ಡಾ. ಆನಂದ, ಡಾ. ಜಾನಕೀರಾಮ, ಕೆ. ಪಿ. ಎಂ. ರೆಡ್ಡಿ, ಜಿ. ಎಸ್. ನಾಗರಾಜ್, ಜಿ. ಎಸ್. ಸತ್ಯನಾರಾಯಣ ಮೊದಲಾದವರು ಪಾಲ್ಗೊಂಡಿದ್ದರು. ನಾಡಿನ ಎಲ್ಲ ಕಡೆಗಳಿಂದ, ವಿಭಿನ್ನ ಕ್ಷೇತ್ರಗಳಲ್ಲಿನ ಸದಸ್ಯರು ಈ

ಸಮ್ಮೇಳನದಲ್ಲಿ ಭಾಗವಹಿಸಿದ್ದುದು ವಿಶೇಷ. ಈ ಸಂದರ್ಭದಲ್ಲಿ ಕನ್ನಡಿಗರನ್ನು ಎಚ್ಚರಿಸುವ ಸಲುವಾಗಿ 'ಸಂಪೂರ್ಣ ಕರ್ನಾಟಕ' ಎಂಬ ಕಿರು ಹೊತ್ತಿಗೆಯನ್ನೂ ತರಲಾಯಿತು. ಅಣ್ಣೂ ಗುರೂಜಿ ಮತ್ತು ಜಯದೇವಿ ತಾಯಿ ಲಿಗಾಡೆ ಅವರುಗಳ ನೆರವನ್ನು ಈ ಸನ್ನಿವೇಶದಲ್ಲಿ ಸ್ಮರಿಸಲಾಗಿದೆ.[೭]

## ೫.೨.೧೦ ಮಹಾಜನ್ ಆಯೋಗದ ನೇಮಕ ಮತ್ತು ವಿರೋಧಗಳು

ಕರ್ನಾಟಕ, ಮಹಾರಾಷ್ಟ್ರ ಹಾಗೂ ಕೇರಳ ನಡುವಿನ ಗಡಿ ವಿವಾದಗಳನ್ನು ಕುರಿತ ಚಳವಳಿಗಳಿಂದ ಕೇಂದ್ರ ಸರ್ಕಾರವು ಜಾಗೃತಗೊಂಡಿತು. ಮರಾಠಿಗರಂತು ತೀವ್ರವಾದ ರೀತಿಯಲ್ಲಿ ಪ್ರತಿಕ್ರಿಯಿಸುತ್ತಿದ್ದರು. ಮಹಾರಾಷ್ಟ್ರದಲ್ಲಿ ಬಾಪಟ್ ಅವರು ಉಪವಾಸ ಸತ್ಯಾಗ್ರಹ ಇತ್ಯಾದಿಗಳನ್ನು ಆರಂಭಿಸಿದ ಹಿನ್ನೆಲೆಯಲ್ಲಿ ೨೫-೧೦-೧೯೬೬ರಂದು ಸರ್ಕಾರವು ಏಕ ಸದಸ್ಯ ಸಮಿತಿಯೊಂದನ್ನು ನೇಮಕ ಮಾಡಿತು. ಈ ಸಮಿತಿಯೆ ಮೆಹರ್ ಚಂದ್ ಮಹಾಜನ್ ಸಮಿತಿ. ಮಹಾಜನ್ ಅವರನ್ನು ಗಡಿಸಮಸ್ಯೆಗಳನ್ನು ಅಧ್ಯಯನ ಮಾಡಿ ಪರಿಹಾರಗಳನ್ನು ಸೂಚಿಸಲು ಕೇಳಿಕೊಳ್ಳಲಾಗಿತ್ತು. ಈ ಸಮಿತಿ ನೀಡುವ ವರದಿಗೆ ತಾವು ಬದ್ಧರೆಂದು ಮಹಾರಾಷ್ಟ್ರದ ಅಂದಿನ ಮುಖ್ಯಮಂತ್ರಿ ವಿ. ಪಿ. ನಾಯಕ್ ಘೋಷಿಸಿದ್ದೂ ಉಂಟು. ಕನ್ನಡಿಗರು ಈ ಪ್ರಕ್ರಿಯೆಗಳಿಗೆ ಪ್ರತಿಕ್ರಿಯಿಸದೆ ಇರಲಿಲ್ಲ. ಕನ್ನಡಿಗರು, ಮಹಾರಾಷ್ಟ್ರ ಸರ್ಕಾರಕ್ಕೆ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆಸ್ ಪಕ್ಷದ ಸರಕಾರ ಮಣಿದಿದೆ ಎಂದು ಪ್ರತಿಭಟಿಸಲು ಆರಂಭಿಸಿದರು. ಮಹಾಜನ್‌ರ ವಿರುದ್ಧ ತೀವ್ರವಾದ ಪ್ರತಿಭಟನೆಗಳನ್ನು ಒಡ್ಡಲಾಯಿತು. ನಾಡಿನ ಎಲ್ಲೆಡೆ ರಸ್ತೆ ತಡೆ, ರೈಲು ತಡೆ, ಮೆರವಣಿಗೆ, ಪ್ರದರ್ಶನ, ಬಂದ್ ಆಚರಣೆ, ಚಳವಳಿಗಳು ಉಗ್ರರೂಪವನ್ನು ಪಡೆದವು. ಇಂಥ ವಿರೋಧಗಳ ನಡುವೆ ಮಹಾಜನರು ತಮ್ಮ ಸರ್ವೇಕ್ಷಣ ಕೆಲಸಗಳನ್ನು ಮುನ್ನಡೆಸಿದರು. ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು ಈ ಸಮಿತಿಗೆ ಯಾವುದೇ ರೀತಿಯ ವಿರೋಧವನ್ನು ವ್ಯಕ್ತಪಡಿಸಲಿಲ್ಲ. ಕೇಂದ್ರದಲ್ಲಿ ಕಾಂಗ್ರೆಸ್ ಪಕ್ಷ ಅಧಿಕಾರದಲ್ಲಿದ್ದುದು ಈ ರೀತಿಯ ಪ್ರತಿಕ್ರಿಯೆಗೆ ಕಾರಣವೆಂದು ಕನ್ನಡಿಗರು ಅರಿತರು. ನಿಜಲಿಂಗಪ್ಪನವರ ಮೌನಕ್ಕೆ ಎಲ್ಲ ಕಡೆಗಳಿಂದಲೂ ಟೀಕೆಗಳು ಬಂದವು. ಅನೇಕ ಪತ್ರಿಕೆ-ನಿಯತಕಾಲಿಕೆಗಳು ವಿಶೇಷ ಸುದ್ದಿ ಮಾಡಿ ವಿರೋಧಿಸಿದ್ದು ಚಳವಳಿ ತೀವ್ರವಾಗಲು ಕಾರಣವಾಯಿತು.

## ೫.೨.೧೧ ಮರುಕಳಿಸಿದ ಬಾವುಟದ ಪ್ರಶ್ನೆ

ಕನ್ನಡ ಚಳವಳಿಕಾರರು ಇಂಥ ಸಂದಿಗ್ಧ ಸನ್ನಿವೇಶದಲ್ಲಿಯೆ (೧೯೬೬ರ ನವೆಂಬರ್) ಹೊಸ ಕನ್ನಡ ಬಾವುಟದೊಂದಿಗೆ ರಾಜ್ಯೋತ್ಸವವನ್ನು ಆಚರಿಸಲು ಸಿದ್ಧತೆಗಳನ್ನು ನಡೆಸಿದ್ದರು. ಹಿಂದಿನ ವರುಷ ಪ್ರತ್ಯೇಕವಾಗಿ ಎರಡು ಕಡೆಗಳಲ್ಲಿ ರಾಜ್ಯೋತ್ಸವವನ್ನು ಆಚರಿಸಿದ್ದು ಇನ್ನೂ ಮಾಸಿರಲಿಲ್ಲ. ಮತ್ತೆ ಪ್ರತ್ಯೇಕವಾಗಿ ಆಚರಿಸುವುದು ಕನ್ನಡಿಗರ ಒಗ್ಗಟ್ಟನ್ನು ಪ್ರಶ್ನೆ ಮಾಡುವಂತೆ ಇತ್ತು. ಹೀಗಾಗಿ ನವೆಂಬರ್ ೧ರ ರಾಜ್ಯೋತ್ಸವವನ್ನು ಕೆಂಪಾಂಬುದಿ ಕೆರೆಯ ಮೈದಾನದಲ್ಲಿ (ಸುಭಾಶ್ ನಗರ) ಒಂದೇ ಕಡೆಗೆ ಆಚರಿಸುವುದರ ಮುಖೇನ ಮಹಾಜನ್ ಸಮಿತಿ ವಿರುದ್ಧ ನಡೆಯುತ್ತಿದ್ದ ಚಳವಳಿಗೆ ಇನ್ನಷ್ಟು ಉತ್ಸಾಹವನ್ನು ತುಂಬಲಾಯಿತು. ಈ ಆಚರಣೆ ಮುಗಿದ ಕೂಡಲೇ ಕನ್ನಡ ಬಾವುಟದ ಸಮಸ್ಯೆ ಹುಟ್ಟಿಕೊಂಡು

ಮತ್ತೆ ಕನ್ನಡಿಗರನ್ನು ಆತಂಕಕ್ಕೆ ಎಡೆ ಮಾಡಿಕೊಟ್ಟದ್ದು ಗಮನಿಸಬೇಕಾದ ಸಂಗತಿ. ಮ. ರಾಮಮೂರ್ತಿ ಅವರು ಒಪ್ಪಿಕೊಂಡಿದ್ದ ಎರಡು ಮೂಲೆಗಳುಳ್ಳ ಕರ್ನಾಟಕದ ನಕ್ಷೆಯಿರುವ ಹಳದಿ ಬಾವುಟವನ್ನು ಅದೇ ವರುಷವೆ (೧೯೬೭ರ ಕೊನೆಯ ವೇಳೆಗೆ) ಅವರೇ ಮತ್ತೆ ಬದಲಾಯಿಸಿದ್ದು ಚಳವಳಿಗಾರರನ್ನು ಗೊಂದಕ್ಕೀಡುಮಾಡಿತು.

### ೫.೨.೧೨ 'ಕನ್ನಡ ಪಕ್ಷ' ಮತ್ತು 'ಕನ್ನಡ ಚಳವಳಿ ಪಕ್ಷ'ಗಳ ಹುಟ್ಟು

ಕನ್ನಡ ಚಳವಳಿಗಾರರ ಮುಂದೆ ಇದ್ದದ್ದು ಎರಡು ಪ್ರಧಾನವಾದ ಪ್ರಶ್ನೆಗಳು. ಒಂದು ಮಹಾಜನ್ ವರದಿ ವಿರುದ್ಧ ನಡೆಯುತ್ತಿದ್ದ ಚಳವಳಿಯನ್ನು ಮುನ್ನಡೆಸುವುದು ಹಾಗೂ ಇನ್ನೊಂದು, ತಮ್ಮ ತನದ ಗುರುತಿಗೆ ಕನ್ನಡ ಬಾವುಟದ ಸಮಸ್ಯೆಯನ್ನು ಆದಷ್ಟು ಬೇಗ ಬಗೆಹರಿಸಿಕೊಳ್ಳುವುದು. ಏಕೆಂದರೆ ಡಿ.ಎಂ.ಕೆ ಪಕ್ಷದ ತಮಿಳರ ಬಾವುಟಗಳನ್ನು ತೆಗೆದುಹಾಕಿ ತಮ್ಮ ಕನ್ನಡದ ಬಾವುಟಗಳನ್ನು ಹಾರಿಸುತ್ತಿದ್ದ ಉತ್ಸಾಹಿ ಕನ್ನಡ ಕಾರ್ಯಕರ್ತರಿಗೆ ನಿರುತ್ಸಾಹ ಮೂಡಲಾರಂಭಿಸಿತ್ತು. ೧೯೬೭ರ ಕೊನೆಯ ಹೊತ್ತಿಗೆ ಮ. ರಾಮಮೂರ್ತಿ ಮತ್ತು ವಾಟಾಳ್ ನಾಗರಾಜ ಅವರುಗಳು ರಾಜಕೀಯವಾಗಿ ಕನ್ನಡ ಚಳವಳಿಯನ್ನು ಬಲಗೊಳಿಸುವುದರ ಕಡೆಗೆ ಗಮನಹರಿಸಿದರು. ಮುಂದೆ ಬರಲಿದ್ದ (೧೯೬೭ರ) ಚುನಾವಣೆಗಳಲ್ಲಿ ಇಬ್ಬರೂ ಸ್ಪರ್ಧಿಸುವುದು, ಆ ಮೂಲಕ ಕನ್ನಡಿಗರ ಆಶೋತ್ತರಗಳನ್ನು ಈಡೇರಿಸುವುದು ಕಾರ್ಯಕರ್ತರ ಒತ್ತಾಯವಾಗಿತ್ತು. ಈ ಮಧ್ಯೆ ತಮಿಳುನಾಡಿನಲ್ಲಿ ಡಿ.ಎಂ.ಕೆ ಪ್ರಾದೇಶಿಕ ಪಕ್ಷ ಹಾಗೂ ಮಹಾರಾಷ್ಟ್ರದಲ್ಲಿ, ಬೆಳಗಾವಿಯಲ್ಲಿ 'ಮಹಾರಾಷ್ಟ್ರ ಏಕೀಕರಣ ಸಮಿತಿ' ಪಕ್ಷಗಳ ಪ್ರಗತಿ ತೀವ್ರವಾಗಿತ್ತು. ಇವರಿಂದಾದ ಕನ್ನಡಿಗರ ಮೇಲಿನ ಆಕ್ರಮಣಕಾರಿ ಪ್ರವೃತ್ತಿಗಳು ಕನ್ನಡಿಗರದೇ ಆದ ಪ್ರಾದೇಶಿಕ ಪಕ್ಷವೊಂದರ ಹುಟ್ಟಿಗೆ ಬೇಕಾದ ಸನ್ನಿವೇಶವನ್ನು ನಿರ್ಮಾಣ ಮಾಡದಿರಲಿಲ್ಲ. ಚುನಾವಣೆಗೆ ಬಹಳ ಕಡಿಮೆ ಸಮಯವಿದ್ದುದರಿಂದ ರಾಮಮೂರ್ತಿ ಹಾಗೂ ವಾಟಾಳರ ಭಿನ್ನಾಭಿಪ್ರಾಯಗಳು ಸುಲಭದಲ್ಲಿ ಬಗೆಹರಿಯುವುದು ಸಾಧ್ಯವಾಗಲಿಲ್ಲ. ತಾತ್ವಿಕವಾಗಿ ಅಸಮಧಾನರಾಗಿದ್ದ ಎರಡೂ ಕಡೆಯ ಚಳವಳಿಗಾರರು ಮತ್ತೆ ಒಡಕು ಧ್ವನಿಗಳನ್ನು ಎತ್ತಿದರು. ಕೆಲವು ಜಾತಿವಾದಿ ರಾಜಕಾರಣಿಗಳ ಪ್ರೋತ್ಸಾಹವೂ ಈ ಒಡಕನ್ನು ಮತ್ತಷ್ಟು ಹೆಚ್ಚಿಸುವಂತೆ ಮಾಡಿತ್ತು. ಇದರ ಪರಿಣಾಮವಾಗಿಯೆ ಕನ್ನಡದ ಕಾರ್ಯಕರ್ತರು ಎರಡು ರಾಜಕೀಯ ಪಕ್ಷಗಳ ಹುಟ್ಟಿಗೆ ಬೆಂಬಲಿಸಿದ್ದು. ಹೀಗಾಗಿ 'ಕನ್ನಡ ಪಕ್ಷ' ಎಂಬ ಪಕ್ಷವನ್ನು ಮ. ರಾಮಮೂರ್ತಿ ಅವರೂ, 'ಕನ್ನಡ ಚಳವಳಿ ಪಕ್ಷ' ಎಂಬ ಹೆಸರಿನಲ್ಲಿ ವಾಟಾಳರೂ ಎರಡು ಪ್ರಾದೇಶಿಕ ರಾಜಕೀಯ ಪಕ್ಷಗಳನ್ನು ಹುಟ್ಟುಹಾಕಿದರು.

### ೫.೨.೧೩ ಹೊಸ ಕನ್ನಡ ಬಾವುಟದ ಪರಿಚಯ

ಹಿಂದಿನ ಕನ್ನಡದ ಬಾವುಟವನ್ನು ಒಪ್ಪದಿದ್ದ ರಾಮಮೂರ್ತಿ ಅವರು ತಮ್ಮದೇ ಆದ ಹೊಸ ಬಾವುಟವೊಂದರ ಪರಿಚಯಕ್ಕಾಗಿ ಸಭೆ ಕರೆದರು. ಸಂಯುಕ್ತ ರಂಗದ ಕಾರ್ಯಕರ್ತರು ಈ ಸಭೆಯಲ್ಲಿ ಹಾಜರಿದ್ದು ಸೂಚನೆಗಳನ್ನು ನೀಡಬೇಕೆಂದು ಕೇಳಿಕೊಳ್ಳಲಾಗಿತ್ತು. ಅದರಂತೆ ಬೆಂಗಳೂರಿನ ಅರಳೇಪೇಟೆ (ಕಾಟನ್ ಪೇಟೆ)ಯ 'ಕರ್ನಾಟಕ ಮಿತ್ರ ಮಂಡಲಿ'ಯ ವೆ. ನಿ. ಈಶ್ವರಪ್ಪ ಮೊದಲಾದವರು ಡಿ.ಎಂ.ಕೆ ಪಕ್ಷದ ಬಾವುಟಕ್ಕೆ ಪ್ರತಿಯಾಗಿ ಕನ್ನಡ ಬಾವುಟ ಇರಬೇಕೆಂದು ಕೆಂಪು ಮತ್ತು ಹಳದಿ ಬಣ್ಣಗಳನ್ನು ಸೂಚಿಸಿದರು. ನಾಲ್ಕು ಮೂಲೆಗಳುಳ್ಳ

ಬಾವುಟ ಇದಾಗಿತ್ತು. ಆದರೆ ಕರ್ನಾಟಕದ ನಕಾಶೆ ಇರಲಿಲ್ಲ. ಈ ಹೊಸ ಬಾವುಟವನ್ನು ರಾಮಮೂರ್ತಿ ಅವರಾದಿಯಾಗಿ ಒಪ್ಪಿಕೊಂಡರು. ಅಲ್ಲದೆ ತಮ್ಮ ಹೊಸ ರಾಜಕೀಯ ಪಕ್ಷವಾದ 'ಕನ್ನಡ ಪಕ್ಷ'ಕ್ಕೂ ಈ ಬಾವುಟವನ್ನೇ ಸಂಕೇತಿಸಬೇಕೆಂದು ಸೂಚಿಸಲಾಯಿತು. ೧೯೬೬-೬೮ರ ಅವಧಿಯಲ್ಲಿ ಆದ ಈ ಬಾವುಟದ ಪ್ರಕ್ರಿಯೆಗಳು ಹಾಗೆಯೆ ಮುಂದು ವರೆದವು. ಮ. ರಾಮಮೂರ್ತಿ ಅವರು ಇನ್ನೂ ಮುಂದೆ ಯಾವುದೇ ಕನ್ನಡ-ಕನ್ನಡಿಗ-ಕರ್ನಾಟಕವನ್ನು ಪ್ರತಿನಿಧಿಸುವ ಸಭೆ, ಸಮಾರಂಭ, ಚಳವಳಿ ಮೊದಲಾದವುಗಳಿಗೆ ಹಳದಿ-ಕೆಂಪು ಬಾವುಟವನ್ನೇ ಪ್ರದರ್ಶಿಸಬೇಕೆಂದು ಕರೆಕೊಟ್ಟರು. ವಾಟಾಳ್ ನಾಗರಾಜ ಮತ್ತು ಅವರ ಪಕ್ಷದವರು ಹಿಂದಿನ ಬಾವುಟವನ್ನೆ ತಮ್ಮದನ್ನಾಗಿಸಿಕೊಂಡು ಮುಂದುವರೆದಿದ್ದರು. ಹೀಗಾಗಿ ಎರಡೂ ರೀತಿಯ ಬಾವುಟಗಳು ಅಲ್ಲಲ್ಲಿ ಹಾರಾಡತೊಡಗಿದ್ದವು. ಅಷ್ಟೇ ಅಲ್ಲದೆ ಬಾವುಟದ ಗೊಂದಲ ಶಾಶ್ವತವಾಗಿ ಬಗೆಹರಿದಂತೆ ಆಗಲಿಲ್ಲ.

### ೫.೨.೧೪ ರಾಜಕಾರಣದ ಬಲ ಮತ್ತು ರಾಮಮೂರ್ತಿ ನಿಧನ

ಬೆಂಗಳೂರು ನಗರಸಭೆ (ಕಾರ್ಪೊರೇಷನ್)ಯ ಚುನಾವಣೆಯಲ್ಲಿ (೧೯೬೭ರಲ್ಲಿ) ಎಲ್ಲ ರೀತಿಯ ಬೆಂಬಲ, ಜನಪ್ರಿಯತೆ ಗಳಿಸಿದ್ದ ವಾಟಾಳರು ಗೆದ್ದು ಬಂದರು. ಮೊದಲ ಗೆಲುವಿನೊಂದಿಗೆ 'ಕನ್ನಡ ಚಳವಳಿ ಪಕ್ಷ'ವು ಇಲ್ಲಿಂದ ಮುಂದಕ್ಕೆ ರಾಜಕೀಯವಾದ ಬಲವನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಆದರೆ 'ಕನ್ನಡ ಪಕ್ಷ'ದ ರಾಮಮೂರ್ತಿ ಮತ್ತು ಅವರ ಸಂಗಡಿಗರಿಗೆ ನಿರೀಕ್ಷಿತ ಬೆಂಬಲ ದೊರೆಯಲಿಲ್ಲ. ಇದರಿಂದ ರಾಮಮೂರ್ತಿ ಅವರಿಗೆ ಸ್ವಲ್ಪ ಅಸಮಧಾನವೂ ಆಯಿತು. ೧೯೬೭ರ ವಿಧಾನಸಭಾ ಚುನಾವಣೆಯಲ್ಲಿಯೂ ಚಿಕ್ಕಪೇಟೆ ಕ್ಷೇತ್ರದಿಂದ 'ಕನ್ನಡ ಚಳವಳಿ ಪಕ್ಷ'ದ ವಾಟಾಳ್ ಆಯ್ಕೆ ಆದರು. ರಾಷ್ಟ್ರೀಯ ಪಕ್ಷವಾಗಿದ್ದ ಕಾಂಗ್ರೆಸ್ಸಿನ ಅಭ್ಯರ್ಥಿ ವೈ. ರಾಮಚಂದ್ರರನ್ನು ಸೋಲಿಸಿದ್ದು ಕನ್ನಡ ಪ್ರಾದೇಶಿಕ ಪಕ್ಷವೊಂದರ ಜಯ ಎಂದು ಪರಿಗಣಿಸಲಾಯಿತು. ಈ ವೇಳೆಗಾಗಲೇ 'ಕನ್ನಡ'ದ ಹೆಸರಿನಲ್ಲಿ ಆರ್ಥಿಕವಾಗಿ ಬರಿದಾಗಿದ್ದ ರಾಮಮೂರ್ತಿ ಚಳವಳಿಗಳಲ್ಲಿ ತಮ್ಮನ್ನು ಹೆಚ್ಚು ತೊಡಗಿಸಿಕೊಳ್ಳಲು ಸಾಧ್ಯ ಆಗಲಿಲ್ಲ. ಸಣ್ಣ ಪುಟ್ಟ ಕನ್ನಡದ ಕೆಲಸಗಳಿಗಾಗಿ ಹಾಗೂ ಜೀವನೋಪಾಯಕ್ಕಾಗಿ ಬೆಂಗಳೂರಿನ ಕಗ್ಗಲಿಪುರದ ಬಳಿಯ (ತಲಘಟ್ಟಪುರದಲ್ಲಿ) ತಮ್ಮ ತೋಟದಲ್ಲಿ ವ್ಯವಸಾಯವನ್ನು ಮಾಡಿಕೊಂಡಿರಲು ಯೋಚಿಸಿದರು. ಅದರಂತೆ ಅಲ್ಲೊಂದು ಬಾವಿಯನ್ನು ತೋಡಿಸಿದ್ದುಂಟು. ನೀರು ಬರುವುದನ್ನು ನೋಡಲು ಬಾವಿಗಿಳಿದ ರಾಮಮೂರ್ತಿ ಅವರು ತಮ್ಮ ಇಬ್ಬರು ಮಕ್ಕಳೊಂದಿಗೆ (ದಿನಕರ ಮತ್ತು ಮಂಜು) ೨೫-೧೨-೧೯೬೭ರಂದು ಕೊನೆಯುಸಿರನ್ನೆಳೆಯ ಬೇಕಾಯಿತು. ಇವರೊಂದಿಗೆ ಕೂಲಿ ಆಳುಗಳು ಸಹ ಮಡಿದರು. ಅನಿರೀಕ್ಷಿತವಾಗಿ ಬಾವಿಯೊಳಕ್ಕೆ ಮಣ್ಣು ಕುಸಿದು ಕನ್ನಡಿಗರಿಂದ, ಚಳವಳಿಯಿಂದ ದೂರ ಸರಿದ ರಾಮಮೂರ್ತಿ ಅವರು 'ಕನ್ನಡ ಸೇನಾನಿ' ಎಂದೇ ಕರೆಸಿಕೊಂಡಿದ್ದವರು.[೮]

ರಾಮಮೂರ್ತಿ ಅವರ ನಂತರ 'ಕನ್ನಡ ಪಕ್ಷ'ದ ನೈತೃತ್ವ ವಹಿಸಿಕೊಂಡವರು ತ. ರಾ. ಸುಬ್ಬರಾವ್. ಅಧ್ಯಕ್ಷರಾಗಿ ತ. ರಾ. ಸು. ಕನ್ನಡ ಚಳವಳಿಯನ್ನು ಮುಂದುವರೆಸಿದರು. ಇವರೊಂದಿಗೆ ಬಾ.ಸು. ಕೃಷ್ಣಮೂರ್ತಿ, ಮೈ.ಸು. ಶೇಷಗಿರಿರಾವ್, ಮೈ. ಸು. ನಟರಾಜನ್, ವೀರಕೇಸರಿ ಲಕ್ಷ್ಮಿನಾರಾಯಣ, ರಾಮದಾಸ್, ಬೆ. ನಿ. ಈಶ್ವರಪ್ಪ, ತಿ. ಶ್ರೀನಿವಾಸ

ಮೊದಲಾದವರು ಸಹ ಇದ್ದರು. ಇವರೆಲ್ಲರು ಇದ್ದರೂ ಸಹ ವಾಟಾಳರ ನೇತೃತ್ವದ 'ಕನ್ನಡ ಚಳವಳಿ ಪಕ್ಷ'ದಷ್ಟು ಜನಪ್ರಿಯತೆಯನ್ನು ಗಳಿಸಲು ಸಾಧ್ಯವಾಗಲಿಲ್ಲ.

### ೫.೨.೧೫ ಅ. ಸಂಜೀವಪ್ಪ ಮತ್ತು ವಾಟಾಳರ ಭಿನ್ನಾಭಿಪ್ರಾಯಗಳು

ವಿಧಾನಸಭಾ ಸದಸ್ಯರಾದ ವಾಟಾಳ್ ಅವರು ಕನ್ನಡ ಚಳವಳಿಯ ಅಗ್ರಗಣ್ಯ ನಾಯಕರೆನ್ನಿಸಿಕೊಂಡರು. ಇವರೊಂದಿಗೆ ಅ. ಸಂಜೀವಪ್ಪ, ಸಾ. ಕೃ. ಸಂಪಂಗಿ, ಜಿ. ನಾರಾಯಣ ಕುಮಾರ್, ಪ್ರಭಾಕರ ರೆಡ್ಡಿ ಮೊದಲಾದವರು ಕನ್ನಡಪರವಾದ ಎಲ್ಲಾ ಸಮಸ್ಯೆಗಳಿಗೂ ಸ್ಪಂದಿಸಿದ್ದು ಗಮನಾರ್ಹ. ಸಂಯುಕ್ತ ರಂಗ, ಯುವಜನ ಸಭಾ, ಕನ್ನಡ ಪಕ್ಷಗಳು ೧೯೬೮ರ ವೇಳೆಗೆ ವಾಟಾಳರಷ್ಟು ಪ್ರಚಾರದಲ್ಲಿ ಇರಲಿಲ್ಲ. ಈ ಸಂದರ್ಭದಲ್ಲಿ ದೆಹಲಿಯ ಲೋಕಸಭೆಯಲ್ಲಿ ಜೆ. ಎಚ್. ಪಟೇಲರು ಕನ್ನಡದಲ್ಲಿ ಮಾತನಾಡಿ ಸುದ್ದಿ ಮಾಡಿದ್ದು ಸಮಾಜವಾದಿ ಹಿನ್ನೆಲೆಯ ಕೋಣಂದೂರು ಲಿಂಗಪ್ಪ, ಶಾಮಣ್ಣ, ತೇಜಸ್ವಿ, ಕೆ. ಜಿ. ಮಹೇಶ್ವರಪ್ಪ, ಬಂದಗದ್ದೆ ರಮೇಶ್ ಮೊದಲಾದ ಗೆಳೆಯರಿಗೆ ಹುರುಪು ತಂದುಕೊಟ್ಟಿತ್ತು. ಆದರೆ ವಾಟಾಳರಷ್ಟು ಜನಪ್ರಿಯತೆ ಸಮಾಜವಾದಿ ಧುರೀಣರಿಗೂ ದೊರೆತಿರಲಿಲ್ಲ. ಈ ಥರದ ವಾಟಾಳರ ಜನಪ್ರಿಯತೆ ಕನ್ನಡ ಚಳವಳಿಗಾರರಲ್ಲಿ ಅನೇಕರಿಗೆ ಅಸಮಧಾನವನ್ನು ಉಂಟುಮಾಡಿತ್ತು. ಕೆಲವರು ಕನ್ನಡ ಚಳವಳಿಯನ್ನು ಸ್ವಾರ್ಥ ರಾಜಕಾರಣಕ್ಕಾಗಿ ವಾಟಾಳ್ ಬಳಸಿಕೊಳ್ಳುತ್ತಿರುವುದು ಸರಿಯಲ್ಲವೆಂದು ತಾತ್ವಿಕ ಭಿನ್ನಾಭಿಪ್ರಾಯಗಳನ್ನೊಡ್ಡಿ ಹಿಂದಕ್ಕೆ ಸರಿದರು. ಇದರಲ್ಲಿ ವಾಟಾಳರ ನಿಕಟವರ್ತಿ, ಬಲಗೈ ಎನ್ನಿಸಿದ್ದ ಅ. ಸಂಜೀವಪ್ಪ ಅವರೂ ಒಬ್ಬರು. ಸಂಜೀವಪ್ಪನವರು ಚಳವಳಿಯಿಂದ ಹೊರಬಂದುದರಿಂದ ಅವರೊಂದಿಗೆ ಬಹಳಷ್ಟು ಕಾರ್ಯಕರ್ತರು ಬೇರೆ ಗುಂಪನ್ನೇ ಮಾಡಿದ್ದು ಉಂಟು. ಆದರೆ ಸಂಜೀವಪ್ಪ ಮೌನವ್ರತವನ್ನು ಆಚರಿಸಿ ಕೇವಲ ಬರವಣಿಗೆಯಿಂದಲೇ ಮಾರ್ಗದರ್ಶನ ನೀಡುತ್ತಿದ್ದರು. ಹೀಗಾಗಿ ಅವರು ಮಾತನಾಡದೆ ಜನರನ್ನು ಸಂಘಟಿಸಲು ಪ್ರಯತ್ನಪಟ್ಟು ಕ್ರಮೇಣ ಕನ್ನಡಿಗರಿಂದ, ಚಳವಳಿಯಿಂದ ದೂರ ಉಳಿಯುವಂತೆ ಆಯಿತು. ಇವರ ಕೊನೆಯ ದಿನಗಳು ಭೀಕರ ಬಡತನದಿಂದ ನರಳುವಂತೆ ಮಾಡಿದವು. ಹತ್ತಿರದಿಂದ ಬಲ್ಲ ಅನೇಕ ಆಪ್ತರು ಸಂಜೀವಪ್ಪನವರಿಗೆ ಊಟವನ್ನು ಹಾಕಿ ಸಲಹಿದ್ದೂ ಇದೆ.

### ೫.೨.೧೬ ಕನ್ನಡದ ವಿರುದ್ಧ 'ರಾಜಾಜಿ' ಹೇಳಿಕೆ ಮತ್ತು ಪ್ರತಿಭಟನೆ

ಈ ಮಧ್ಯೆ ಮಧುರೈನಲ್ಲಿ ಮೊದಲ ವಿಶ್ವ ತಮಿಳು ಸಮ್ಮೇಳನವೊಂದು ನಡೆಯಿತು. ಇದರ ಪ್ರಭಾವದಿಂದ ಬೆಂಗಳೂರಿನಲ್ಲಿದ್ದ ತಮಿಳು ಸಂಘಟನೆಗಳು ಹುರುಪು ಪಡೆಯತೊಡಗಿದ್ದವು. ಈ ಸಮ್ಮೇಳನದಲ್ಲಿ 'ರಾಜಾಜಿ' ಎಂದೇ ಹೆಸರು ಪಡೆದಿದ್ದ ಸಿ. ರಾಜಗೋಪಾಲಾಚಾರ್ (ಸಿ. ಆರ್.) ಅವರು ೧೩-೧-೧೯೬೮ರ ತಮ್ಮ 'ಸ್ವರಾಜ್ಯ' ಸಂಚಿಕೆಯಲ್ಲಿ ಕನ್ನಡಕ್ಕೆ ದಕ್ಕೆ ತರುವಂಥ ಹೇಳಿಕೆ ನೀಡಿದ್ದರು. ಅವರು 'ಕನ್ನಡವು ಕ್ರೈಸ್ತ ಪಾದ್ರಿಗಳು ತಿದ್ದಿದ ತೆಲುಗು ಲಿಪಿಯಲ್ಲಿ ಬರೆಯಲಾಗುತ್ತಿರುವ ಬಹುತೇಕ ತಮಿಳು ಭಾಷೆ'ಯೇ (Kannada as spoken is almost Tamil written in Telugu Script as reshaped by early christian missionaries) ಆಗಿದೆ ಎಂದಿದ್ದರು. ಇಂಥ ಹೇಳಿಕೆ ಕನ್ನಡಿಗರನ್ನು ಕೆರಳಿಸದೆ ಬಿಡಲಿಲ್ಲ. ನಾಡಿನ ಎಲ್ಲ ಸಂಘಟನೆಗಳು ಹಾಗೂ ಚಳವಳಿಗಾರರು ತೀವ್ರವಾಗಿ ಪ್ರತಿಭಟಿಸಲು ಮುಂದಾದರು. ಅದರಲ್ಲೂ ಬೆಂಗಳೂರಿನ ಬಡಾವಣೆಗಳಲ್ಲಿ

ಈ ಪ್ರತಿಭಟನೆ ತೀವ್ರ ಸ್ವರೂಪ ಪಡೆಯಿತು. ಚಳವಳಿಯಿಂದ ಹಿಂದಕ್ಕೆ ಸರಿದಿದ್ದ ಅ.ನ.ಕೃ ಈ ಹೇಳಿಕೆ ವಿರುದ್ಧ ಮತ್ತೆ ಕನ್ನಡದ ಪರವಾಗಿ ಧ್ವನಿ ಎತ್ತಿದ್ದು ಗಮನ ಸೆಳೆಯುವಂತೆ ಆಗಿತ್ತು.

ಕನ್ನಡ ಚಳವಳಿಯ ಹೆಸರಿನಲ್ಲಿ ಶಾಸಕರಾಗಿ ಆಯ್ಕೆ ಆಗಿದ್ದ ವಾಟಾಳ್ ನಾಗರಾಜ್, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ವೆಂಕಟಸುಬ್ಬಯ್ಯ ಮೊದಲಾದವರು ಮೌನ ವಹಿಸಿದ್ದು ಕನ್ನಡಿಗರನ್ನು ಚಕಿತರನ್ನಾಗಿಸಿತ್ತು. ಡಿ. ವಿ. ಗುಂಡಪ್ಪನವರು ರಾಜಾಜಿ ಬಗ್ಗೆ ಅಪಾರ ಗುರು ಪ್ರೀತಿಯನ್ನೇ ಇಟ್ಟುಕೊಂಡಿದ್ದವರು. ಅಲ್ಲದೆ ಸಿದ್ಧವನಹಳ್ಳಿ ಕೃಷ್ಣಶರ್ಮ, ಜಿ. ಪಿ. ರಾಜರತ್ನಂರಂಥ ಕನ್ನಡದ ಸಾಹಿತಿಗಳು ಸಹ ರಾಜಾಜಿ ಅವರ ಹೇಳಿಕೆಯನ್ನು ಸಮರ್ಥಿಸಿಕೊಳ್ಳುವ ಹಾದಿ ಹಿಡಿದದ್ದುಂಟು. ರಾಜಾಜಿ ಹೇಳಿಕೆಯನ್ನು ಶಂ. ಬಾ. ಜೋಶಿ, ಅಂದಾನಪ್ಪ ದೊಡ್ಡಮೇಟಿ, ಜಿ. ವಿ. ಹಳ್ಳಿಕೇರಿ, ಮಂಗಳವೇಡೆ ಶ್ರೀನಿವಾಸರಾವ್, ಬಿ. ಶಿವಮೂರ್ತಿಶಾಸ್ತ್ರಿ, ಬಿ. ಪುಟ್ಟಸ್ವಾಮಯ್ಯ, ಡಾ. ಪಿ. ತಿಪ್ಪೇರುದ್ರಸ್ವಾಮಿ, ದೇ. ಜವರೇಗೌಡ, ಡಾ. ವಿ. ಕೆ. ಜವಳಿ, ಹಂ. ಪ. ನಾಗರಾಜಯ್ಯ, ಸುಜನಾ ಮೊದಲಾದ ಸಾಹಿತಿ-ರಾಜಕಾರಣಿಗಳು ಪ್ರತಿಭಟಿಸಿದರು.

ಕನ್ನಡ ಚಳವಳಿಗಾರರು ಛಿದ್ರಗೊಂಡಿದ್ದರೂ ಈ ಸಂದರ್ಭದಲ್ಲಿ ಮತ್ತೆ ಒಂದಾಗಿ ಅಲ್ಲಿ ಪ್ರತಿಭಟಿಸಲು ಆರಂಭಿಸಿದರು. ಅದರಲ್ಲೂ ಜೀರಿಗೆ ಲೋಕೇಶ್, ಕೋ. ಹೊ. ರಾಮಣ್ಣಗೌಡ, ಯಶವಂತ ನಾಗರಾಜ್, ಲಕ್ಕಯ್ಯ ಚಂದ್ರಶೇಖರ್ ಮೊದಲಾದವರು ಸಕ್ರಿಯವಾಗಿ ಪಾಲ್ಗೊಂಡು ಚಳವಳಿಯನ್ನು ಚಾಲ್ತಿಯಲ್ಲಿ ಇಟ್ಟಿದ್ದರು. ಇವರಿಗೆಲ್ಲ ಹಿರಿಯ ಪತ್ರಕರ್ತ ಕಲ್ಲೇಶಿವೋತ್ತಮ ಅವರು ಮಾರ್ಗದರ್ಶನಗಳನ್ನು ನೀಡುತ್ತಿದ್ದುದುಂಟು. 'ಕನ್ನಡ ದ್ರೋಹಿ' ರಾಜಾಜಿ ಹೆಸರಿನ 'ರಾಜಾಜಿ ನಗರ' (ಈ ಹೊತ್ತಿಗೂ ಇದೆ)ವನ್ನು ಕೂಡಲೇ ತೆಗೆದುಹಾಕಿ ಕನ್ನಡಿಗರ ಸಾಮ್ರಾಜ್ಯದ ಹೆಸರಾದ 'ವಿಜಯನಗರ' (ಹಂಪಿ) ಎಂದು ಮರುನಾಮಕರಣ ಮಾಡಬೇಕೆಂದು ಸಭೆ, ಪ್ರದರ್ಶನ, ಪ್ರತಿಭಟನೆಗಳು ನಡೆದವು.[೬] ಆದರೆ ಕನ್ನಡದ ಅನೇಕ ಪತ್ರಿಕೆಗಳು ಈ ಬಗ್ಗೆ ಹೆಚ್ಚಿನ ಪ್ರಚಾರ ನೀಡಲಿಲ್ಲ. ಬದಲಾಗಿ ಅಲ್ಲಿದ್ದ ಪುರೋಹಿತ ಶಾಹಿ ಜನವರ್ಗ ರಾಜಾಜಿ ಏಜಂಟರಂತೆ ವರ್ತಿಸಿ ಅವರ ಹಿತವನ್ನು ರಕ್ಷಿಸಲು ಮುಂದಾಗಿದ್ದರು. ಹೀಗಾಗಿ ರಾಜಾಜಿ ವಿರುದ್ಧ ನಡೆದ ಪ್ರತಿಭಟನೆ ಕಾರ್ಯಕ್ರಮಗಳಿಗೆ ತಕ್ಕ ಪ್ರಚಾರ ದೊರೆಯಲಿಲ್ಲ.

ಒಟ್ಟಾರೆ ವಾಟಾಳ್ ನಾಗರಾಜ್ ಅವರಂಥವರು ಈ ಸಂದರ್ಭದಲ್ಲಿ ಸುಮ್ಮನಿದ್ದಾಗ ಇನ್ನುಳಿದ ಕನ್ನಡದ ಸಂಘಟನೆಗಳು ಪ್ರತಿಕ್ರಿಯಿಸಿ, ಚಳವಳಿಯನ್ನು ಚಾಲ್ತಿಯಲ್ಲಿಟ್ಟದ್ದು ಗಮನಾರ್ಹ. ಅಂಥವುಗಳಲ್ಲಿ ಉತ್ತರ ಬಡಾವಣೆಯ ರಾಜ್ಯೋತ್ಸವ ಸಮಿತಿ (ಕೆ. ಜಿ. ಮಹೇಶ್ವರಪ್ಪನವರ ನೇತೃತ್ವದಲ್ಲಿ), ಕನ್ನಡ ದಳ (ಯಶವಂತ್ ನಾಗರಾಜ್), ಕನ್ನಡ ಅಭಿಮಾನಿ ರಂಗ (ಮಲ್ಲೇಶ್ವರಂನಲ್ಲಿ), ಕನ್ನಡ ಮಾತೃ ಸೇವಾ ಸಂಘ (ರಾಜಾಜಿನಗರ), ಜಯಕರ್ನಾಟಕ ಯುವಕ ಸಂಘ, ಕನ್ನಡ ಕುಲದೈವ ಕುಟೀರ ಮೊದಲಾದವು ಪ್ರಮುಖವು. ಹಿಂದ್ ಸ್ವರಾಜ್ ಯುವಕ ಸಂಘ ಹಾಗೂ ಮಂಗಳವೇಡೆ ಅವರು ರಾಜಾಜಿ ವಿರುದ್ಧ ಕರಪತ್ರಗಳನ್ನು ಹಂಚಿದರು. ಶಾಸಕ ಮಹಾದೇವ ಬಣಕಾರ್, ಇದಿನಬ್ಬ,

ಆರ್. ಅನಂತರಾಮಯ್ಯ (ಮಾಜಿ ಮೇಯರ್) ಮೊದಲಾದವರು ತೀವ್ರವಾಗಿ ಪ್ರತಿಭಟಿಸಿದ್ದುಂಟು. ತೀವ್ರ ಸ್ವರೂಪದ ಪ್ರತಿಭಟನೆಗಳಿಂದಾಗಿ ರಾಜಾಜಿ ಅವರು ಕೊನೆಗೂ ಕನ್ನಡಿಗರನ್ನು ಕ್ಷಮೆ ಕೇಳಲೇಬೇಕಾಯಿತು. ಅನಂತರವೇ ಚಳವಳಿ, ಮೆರವಣಿಗೆ, ಪ್ರದರ್ಶನಗಳು ನಿಂತದ್ದು.

### ೫.೨.೧೭ ಕನ್ನಡ ಬಾವುಟದ ಅಂತಿಮರೂಪ

'ರಾಜಾಜಿ' ವಿರುದ್ಧ ನಡೆದ ಚಳವಳಿ ಹಾಗೂ ಇನ್ನಿತರೆ ಪ್ರತಿಭಟನೆಗಳಲ್ಲೂ ಕನ್ನಡ ಬಾವುಟದ ಗೊಂದಲ ಹಾಗೆಯೇ ಉಳಿದಿತ್ತು. ಚಳವಳಿಗಾರರು ಹಿಂದಿನ ಕರ್ನಾಟಕದ ನಕ್ಷೆಯ ಬಾವುಟ ಹಾಗೂ ಹೊಸ ಹಳದಿ-ಕೆಂಪು ಬಣ್ಣದ (ಡಿ.ಎಂ.ಕೆ ಬಾವುಟವನ್ನು ಹೋಲುವಂಥದ್ದು) ಬಾವುಟಗಳೆರಡನ್ನೂ ಬಳಸುತ್ತಿದ್ದರು. ಈ ಗೊಂದಲಗಳಿಂದ ಪಾರಾಗಲು ಅತಂತ್ರ ಸ್ಥಿತಿಯಲ್ಲಿದ್ದ ಕೆಲವು ಕಾರ್ಯಕರ್ತರು ಒಂದೇ 'ಕನ್ನಡ ಬಾವುಟ'ವನ್ನು ಎಲ್ಲ ಪ್ರದೇಶಗಳ ಕನ್ನಡಿಗರು ಹೊಂದಲು ಯೋಚಿಸುವಂತಾಯಿತು. ಏಕೆಂದರೆ ಬೆ. ನಿ. ಈಶ್ವರಪ್ಪ ಅವರು ಸೂಚಿಸಿದ್ದ ಡಿ.ಎಂ.ಕೆ ಪಕ್ಷದ ಬಾವುಟವನ್ನೇ ನೆನಪಿಸುವ ಕೆಂಪು-ಹಳದಿ ಬಣ್ಣದ ಬಾವುಟ ಅನೇಕರಿಗೆ ಸರಿಕಾಣಲಿಲ್ಲ. ಕೆಲವಂತೂ ಈಶ್ವರಪ್ಪನವರ ಪೂರ್ವಾಶ್ರಮ ಡಿ.ಎಂ.ಕೆ ಪಕ್ಷ (ಅದರಲ್ಲೂ ಡಿ.ಕೆ ಪಕ್ಷ) ವಾಗಿದ್ದುದರಿಂದ ಅದನ್ನೇ ಅವರು ಸೂಚಿಸಿ (ತಮಿಳರ ಬಾವುಟದ ಕೆಂಪು ಬಣ್ಣವನ್ನು ಉಳಿಸಿಕೊಂಡಿದ್ದಕ್ಕೆ) ಮ. ರಾಮಮೂರ್ತಿ ಗಳಿಂದ ನಾಡಿಗೆ ಪರಿಚಯಿಸಿದರೆಂದು ಆಪಾದಿಸಿದ್ದೂ ಉಂಟು. ಹೀಗಾಗಿ ೧೯೬೮ರ ಏಪ್ರಿಲ್ ವೇಳೆಗೆ ಸಂಘಟನೆಯ ಹೆಸರಿಲ್ಲದ[೧೦] ಕರಪತ್ರಗಳು ಬಾವುಟದ ಗೊಂದಲ ನಿವಾರಿಸಲು ಹಂಚಿಕೆಯಾದವು. ಅದರಲ್ಲಿ ಕನ್ನಡಿಗರಿಗೆ ಒಂದೇ ಶಾಶ್ವತ ಬಾವುಟವನ್ನು ಇಟ್ಟುಕೊಳ್ಳಲು, ಆ ಮೂಲಕ ಪ್ರದರ್ಶಿಸಲು ಕರೆ ನೀಡಬೇಕೆಂದು ಎಲ್ಲ ಕನ್ನಡ ಪರವಾದ ಸಂಘ-ಸಂಸ್ಥೆಗಳನ್ನೂ ಕೇಳಿಕೊಳ್ಳಲಾಗಿತ್ತು. ಮುಖ್ಯವಾಗಿ ಕರ್ನಾಟಕ ಸಂಯುಕ್ತ ರಂಗ, ಕನ್ನಡ ಪಕ್ಷ, ಕರ್ನಾಟಕ ಮಿತ್ರ ಮಂಡಲಿ (ಬೆ. ನಿ. ಈಶ್ವರಪ್ಪ ಇದ್ದ ಸಂಘ)ಯ ಸದಸ್ಯರಿಗೆ ಕಳುಹಿಸಿಕೊಟ್ಟಿದ್ದರು. ಈ ಮೂರು ಸಂಘಟನೆಗಳು ರಾಮಮೂರ್ತಿ ಅವರ ನೇತೃತ್ವದಲ್ಲಿ ನಡೆದುಕೊಂಡು ಬಂದಿದ್ದ ಸಂಘಟನೆಗಳಾಗಿದ್ದವು. ಕರಪತ್ರದಲ್ಲಿನ ಕೆಲವು ಸಾಲುಗಳನ್ನು ಉಲ್ಲೇಖಿಸುವುದಾದರೆ,

> "............... ಯಾವ ಬಾವುಟವನ್ನು ಕನ್ನಡದ ಬಾವುಟವೆಂದು ಮ. ರಾಮಮೂರ್ತಿ ಎತ್ತಿ ಹಿಡಿದರೋ ಯಾವೊಂದು ಬಾವುಟ ಪಡಿಯಲ್ಲಿ ನಿಂತ ಸಂಸ್ಕೃತಿಯ ತಳಹದಿಯ ಮೇಲೆ ನಮ್ಮ ಹೋರಾಟವನ್ನು ಮುಂದುವರೆಸಬೇಕೆಂದು ಘೋಷಿಸಿದರೋ, ಆ ಮಾತು ಆ ವರ್ಷದಲ್ಲಿಯೇ ಪರುಪೇರಾಯಿತು. ರಾಮಮೂರ್ತಿ ಯವರೇ ಮತ್ತೊಂದು ಬಾವುಟವನ್ನು ತಯಾರಿಸಿ ಕನ್ನಡ ಪಕ್ಷವೆಂಬ ರಾಜಕೀಯ ಪಕ್ಷವೊಂದನ್ನು ರಚಿಸಿದರು. ಈಗಿರುವ ಕನ್ನಡದ ಪಕ್ಷದ ನಾಯಕರು ಹೇಳುವ ಮಾತು ಇದು. ಆ ಬಾವುಟದ ಬಣ್ಣ ಮೇಲರ್ಧ ಹಳದಿ, ಕೆಳಗರ್ಧ ಕೆಂಪು, ಇದು ಎಂತಹ ಕನ್ನಡ ಅಭಿಮಾನಿಯ ಮನಸ್ಸನ್ನೂ ಸಹ ಕಳವಳಕ್ಕೀಡು ಮಾಡುತ್ತದೆ ಮತ್ತು ಡಿ.ಎಂ.ಕೆ ಪಕ್ಷದ ನೆನಪನ್ನು ತರುತ್ತದೆ. ಈ ಪಕ್ಷದವರು ಹೇಳುತ್ತಾರೆ, ರಾಮಮೂರ್ತಿಯವರು

ಬದುಕಿದ್ದಾಗ ರಾಜಕೀಯ ಪಕ್ಷವೆನ್ನುತ್ತಿದ್ದವರು ಈಗ ಸಾಮಾನ್ಯ ಪಕ್ಷ. ಕನ್ನಡ ನಾಡು, ನುಡಿಗೆ, ಈ ಬಾವುಟದಡಿಯಲ್ಲಿ ನಿಂತು ಹೋರಾಡ ಬೇಕೆಂದು ಕರೆ ಕೊಡುತ್ತಿದ್ದಾರೆ. ನಾವು ಕೇಳುವುದು ಇಷ್ಟೆ. ತಾವೇ ಬೆಳಸಿದ ಶಿಶುವನ್ನು ಯಾವ ಕಟುಕನೂ ತನ್ನ ಕರಗಳಿಂದ ಕಡಿಯಲಾರ. ಈ ಮಾತು ರಾಮಮೂರ್ತಿಯವರ ಆತ್ಮಕ್ಕೆ ಶಾಂತಿಯನ್ನು ತರುವುದಿಲ್ಲ ಎಂದರೆ ತಪ್ಪಾಗಲಾರದು. ತಮಿಳಿನಲ್ಲಿ ಡಿ. ಕೆ ಮತ್ತು ಡಿ.ಎಂ.ಕೆ ಎಂಬ ಪಂಗಡ ಮಾಡಿಕೊಂಡರೇ ವಿನಃ ಕನ್ನಡದಲ್ಲೂ ಈ ರೀತಿಯಾಗಲಿ ಎಂದು ರಾಮಮೂರ್ತಿಯವರು ಸರ್ವಥಾ ಒಪ್ಪಿಕೊಂಡಿರುವರೆಂದರೆ ಮುಕ್ಕಣ್ಣನೂ ಸಹ ನಂಬುವುದಿಲ್ಲ.

ಆದ್ದರಿಂದ ನಾವು ನೀಡುತ್ತಿರುವ ಈ ಕರಪತ್ರಕ್ಕೆ ಕನ್ನಡ ಚಳುವಳಿಗಾರರಾಗಲಿ, ಕನ್ನಡ ಪಕ್ಷದ ನಾಯಕರೆ ಆಗಲಿ ಅಥವ ಕನ್ನಡ ಚಳವಳಿಗಾರರ ಪರಿಷತ್ ನಾಯಕರೆ ಆಗಲಿ ಡಿ.ಎಂ.ಕೆ ರೂಪುಳ್ಳ ಬಾವುಟ ಕನ್ನಡ ಬಾವುಟವೊ ಒಮ್ಮತದಿಂದ ತೀರ್ಮಾನವಾದ ಕರ್ನಾಟಕ ನಕ್ಷೆಯಿರುವ ಎರಡು ಮೂಲೆ ಬಾವುಟ ಕನ್ನಡ ಬಾವುಟವೋ ಇದರ ಬಗ್ಗೆ ಕನ್ನಡಿಗರಿಗೆ ನ್ಯಾಯ ಸಮ್ಮತವಾದ ಹೇಳಿಕೆಯನ್ನು ಕೊಡತಕ್ಕದ್ದೆಂದು ಪ್ರಾರ್ಥಿಸುತ್ತೇವೆ."[೧೧]

- ಎಂದು ಬಿನ್ನವಿಸಿಕೊಂಡಿರುವುದಿದೆ. ಈ ಮಾತುಗಳು ಅಂದು ಚಳವಳಿಗಾರರಲ್ಲಿದ್ದ ಬಾವುಟದ ಬಗೆಗಿನ ಗೊಂದಲಗಳನ್ನು ಸ್ಪಷ್ಟವಾಗಿ ಸಮರ್ಥಿಸುತ್ತವೆ. ಅಲ್ಲದೆ ಆ ಹೊತ್ತಿನ ಕನ್ನಡ ಚಳವಳಿಯ ಛಿದ್ರತೆಗಳನ್ನು ಕಂಡು ಕನ್ನಡೇತರರು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುತ್ತಿದ್ದುದನ್ನು ಗಮನಿಸಿ ಕರಪತ್ರದ ಶೀರ್ಷಿಕೆಯನ್ನು 'ಸ್ವಾರ್ಥ ಸಂಕುಚಿತ ಮತ್ತು ವ್ಯಕ್ತಿಗತ ದ್ವೇಷದಿಂದ ಛಿದ್ರವಾಗಿರುವ ಕನ್ನಡ ಚಳವಳಿ ಮತ್ತೆ ಒಂದಾಗಲಿ' ಎಂದು ಅಚ್ಚುಮಾಡಿಸಲಾಗಿದೆ. ಈ ರೀತಿಯ ದಾಖಲೆಗಳು, ಪ್ರತಿಕ್ರಿಯೆಗಳು ಅ.ನ.ಕೃ, ಮ. ರಾಮಮೂರ್ತಿ, ವಾಟಾಳ್ ನಾಗರಾಜ್, ಸಂಜೀವಪ್ಪ ಮೊದಲಾದವರ ಭಿನ್ನಾಭಿಪ್ರಾಯಗಳಿಂದ ಒಡೆದುಹೋದ ಕನ್ನಡ ಚಳವಳಿಯ ಸ್ವರೂಪವನ್ನು ಪರಿಚಯಿಸುತ್ತದೆ.

'ಕನ್ನಡ ಚಳವಳಿ ಪಕ್ಷ'ದ ವಾಟಾಳರು ಈ ಸಂದರ್ಭದಲ್ಲಿ ಕರ್ನಾಟಕ ನಕಾಶೆಯ ಬಾವುಟವನ್ನೇ ತಮ್ಮ ಪಕ್ಷದ ಅಧಿಕೃತ ಬಾವುಟವೆಂಬಂತೆ ಬಳಸುತ್ತಿದ್ದರು. ಹೀಗಾಗಿ 'ಕನ್ನಡ ಬಾವುಟ'ವು ಅಂತಿಮ ರೂಪ ಪಡೆದುಕೊಂಡದ್ದು ರಾಮಮೂರ್ತಿಗಳು 'ಕನ್ನಡ ಪಕ್ಷ'ಕ್ಕಾಗಿ ಬಳಸುತ್ತಿದ್ದ ಹಳದಿ-ಕೆಂಪು ಬಾವುಟವೆ. ಈ ಎರಡೂ ಬಣ್ಣಗಳಿರುವ ಬಾವುಟವು ರಾಮಮೂರ್ತಿಗಳು ಬದುಕಿದ್ದಾಗ ಹೇಳಿದ್ದ 'ಕನ್ನಡ ಸಂಕೇತ'ವಾಗಿ ಬಳಕೆಗೆ ಬಂದಿತು. ನಾಡಿನಾದ್ಯಂತ ಎಲ್ಲರೂ ಈ ಬಾವುಟವನ್ನೇ (ನಕ್ಷೆ ಹೊರತುಪಡಿಸಿದ) ಒಪ್ಪಿಕೊಂಡರು. ರಾಜ್ಯೋತ್ಸವ ಮೊದಲಾದ ಸಂದರ್ಭಗಳಲ್ಲಿ ಕನ್ನಡ-ಕನ್ನಡಿಗ-ಕರ್ನಾಟಕಗಳ ಅಧಿಕೃತತೆಯನ್ನು ಈ ಹಳದಿ-ಕೆಂಪು ಬಾವುಟ ಸ್ಥಾಪಿಸಿತು. ಈ ಬಣ್ಣಗಳು ಶಾಂತಿ-ಸಹನೆಯ ಹಾಗೂ ಕ್ರಾಂತಿಯ ಸಂಕೇತವೆಂದೂ ಕೆಲವು ಚಳವಳಿಕಾರರು ವಿವರಣೆ ನೀಡಿದ್ದು ಉಲ್ಲೇಖನೀಯ. ಮತ್ತೆ ಕೆಲವರು ಹಳದಿ-ಕೆಂಪು, ಅರಿಸಿನ-ಕುಂಕುಮಗಳನ್ನು ನೆನಪಿಸುವ

ಕನ್ನಡ ಭುವನೇಶ್ವರಿ ತಾಯಿಯ ಮುತ್ತೈದೆತನದ ಸಂಕೇತವೆಂದೂ ವ್ಯಾಖ್ಯಾನಿಸುವುದೂ ಉಂಟು. ಒಟ್ಟಿನಲ್ಲಿ ಈ ಹೊತ್ತಿಗೂ ಹಳದಿ-ಕೆಂಪು ಬಾವುಟ ಕನ್ನಡಿಗರ ಅಧಿಕೃತ ಬಾವುಟವಾಗಿ ಪ್ರದರ್ಶನಗೊಳ್ಳುತ್ತಿದೆ.

### ೫.೨.೧೮ ಹೊಸೂರು-ತಾಳವಾಡಿಗಳ ಮುತ್ತಿಗೆ

ರಾಜಾಜಿ ಪ್ರತಿಭಟನ ಚಳವಳಿಗೆ ಪ್ರತಿಕ್ರಿಯಿಸದಿದ್ದ ವಾಟಾಳರು ತಮಿಳುನಾಡಿನಿಂದ ನಮಗೆ ಸೇರಬೇಕಿದ್ದ ಹೊಸೂರು-ತಾಳವಾಡಿಗಳ ಆಕ್ರಮಣದ ಕಡೆಗೆ ಚಳವಳಿಗಾರರ ಗಮನವನ್ನು ಕೇಂದ್ರೀಕರಿಸುವಂತೆ ಮಾಡಿದರು. ಮಹಾಜನ್ ವರದಿಯು ಈ ಹೊತ್ತಿಗಾಗಲೇ ಮಂಡನೆಯಾಗಿ (೧೯೬೭ರ ಆಗಸ್ಟಿನಲ್ಲಿ) ಅದರ ಅನುಷ್ಠಾನದ ಬಗ್ಗೆ ನಾಡಿನಾದ್ಯಂತ ಚಳವಳಿಗಳು ನಡೆಯುತ್ತಿದ್ದವು. ಈ ಕುರಿತು ಎಸ್. ಬಂಗಾರಪ್ಪ ಹಾಗೂ ವಾಟಾಳರು ಕೇಂದ್ರ ಸರ್ಕಾರದ ವಿರುದ್ಧ ಕಪ್ಪು ಬಾವುಟಗಳನ್ನು ಪ್ರದರ್ಶಿಸಿ ಪ್ರತಿಭಟಿಸಿದರು. ಪ್ರತಿಭಟನೆ, ಪ್ರದರ್ಶನಗಳು ಚಾಲ್ತಿಯಲ್ಲಿರುವಾಗಲೆ ವಾಟಾಳರು ಮಹಾಜನ್ ಸಮಿತಿಯ ಪರಿಧಿಗೆ ಬಾರದ ತಾಳವಾಡಿ, ಹೊಸೂರುಗಳು ಕರ್ನಾಟಕಕ್ಕೆ ಸೇರಬೇಕೆಂದು ಪರ್ಯಾಯ ಚಳವಳಿ ಹೂಡಿದ್ದು ಅನೇಕರಿಗೆ ಅಸಮಧಾನವನ್ನು ತಂದಿತು. ದೊಡ್ಡ ಜಿಲ್ಲೆ ಬೆಳಗಾವಿಯನ್ನೇ ಉಳಿಸಿಕೊಳ್ಳಲು ಮೊದಲ ಆದ್ಯತೆ ನೀಡದೆ ಸಣ್ಣ ತಾಲೂಕುಗಳ ಬಗ್ಗೆ ಗಮನಹರಿಸಲು ಹೊರಟದ್ದು ಅಸಮಂಜಸ, ಅಕಾಲಿಕ ಎಂಬುದು ಉತ್ತರ ಕರ್ನಾಟಕದವರ ನಿಲುವು ಆಗಿತ್ತು.[೧೭] ಇದೇ ಸಂದರ್ಭದಲ್ಲಿ (೧೯೬೬-೬೭) 'Down with Hindi' (DWH) ಎಂಬ ಹಿಂದಿ ವಿರೋಧಿ ಚಳವಳಿ ಆರಂಭ ಆಗಿತ್ತು. ಈ ಚಳುವಳಿಯು ಪ್ರಬಲವಾಗಿದ್ದುದು ಹಳೆಯ ಮೈಸೂರು ಸಂಸ್ಥಾನದ ರಾಜ್ಯಗಳಲ್ಲಿಯೇ. ಈ ಚಳವಳಿಯು ಪ್ರಬಲವಾಗಿದ್ದುದು ಹಳೆಯ ಮೈಸೂರಿನ ಸಂಸ್ಥಾನದ ರಾಜ್ಯಗಳಲ್ಲಿಯೇ. ಆದರೆ ತಮಿಳರಷ್ಟು ಪ್ರಬಲವಾಗಿ ಕನ್ನಡಿಗರು ಹಿಂದಿಯನ್ನು ವಿರೋಧಿಸಲಿಲ್ಲ.

ಕನ್ನಡ ಚಳವಳಿಗಾರರೊಂದಿಗೆ 'ತಾಳವಾಡಿ ಮುತ್ತಿಗೆ' ಹಾಕಲು ವಾಟಳರು ಅಲ್ಲಿಗೆ ಹೋದರು. ಆದರೆ ತಮಿಳುನಾಡು ಸರ್ಕಾರದ ಅಂದಿನ ಮುಖ್ಯಮಂತ್ರಿ ಎಂ. ಕರುಣಾನಿಧಿ ವಾಟಾಳ್ ನಾಗರಾಜರನ್ನು ಬಂಧಿಸಲು ಆದೇಶ ನೀಡಿದ್ದು ಗಮನಾರ್ಹ. ಬಂಧನಕ್ಕೊಳಗಾದ ವಾಟಾಳರ ಪರವಾಗಿ ಕಾರ್ಯಕರ್ತರು ಬೆಂಗಳೂರಿನಾದ್ಯಂತ ತಮಿಳರ ವಿರುದ್ಧ ಪ್ರತಿಭಟಿಸಲು ಆರಂಭಿಸಿದರು. ಈ ಪ್ರತಿಭಟನೆ ಗಾಂಧಿನಗರ, ಕೆಂಪೇಗೌಡ ರಸ್ತೆ (ಮೆಜೆಸ್ಟಿಕ್ ಸರಹದ್ದು) ಮೊದಲಾದ ಕಡೆಗಳಲ್ಲಿ ಹಿಂಸಾತ್ಮಕ ಸ್ವರೂಪವನ್ನು ಪಡೆಯಿತು. ಕನ್ನಡಿಗರ ಹಾಗೂ ತಮಿಳರ ನಡುವೆ ನೇರವಾದ ಗಲಾಟೆ, ದೊಂಬಿಗಳು ತೀವ್ರವಾದವು. ಕನ್ನಡಿಗರ ಮೇಲಿನ ತಮಿಳರ ದೌರ್ಜನ್ಯವನ್ನು ನಟ ಉದಯಕುಮಾರ್ ಎಚ್ಚರಿಸಿದ್ದೂ ಉಂಟು. ಚಳವಳಿ ತೀವ್ರತೆ ಪಡೆದು ಹಿಂಸೆಗಳು ಹೆಚ್ಚಾಗುತ್ತಿದ್ದುದನ್ನು ಗಮನಿಸಿದ ತಮಿಳುನಾಡು ಪೋಲೀಸರು ವಾಟಾಳರನ್ನು ಬಿಡುಗಡೆ ಮಾಡಿದರು. ಚಳವಳಿ ನಿಂತಿತಾದರೂ ಕನ್ನಡದ ರಾಜಕಾರಣಿಗಳಲ್ಲಿ ಅನೇಕರು ಮುಂದಿನ ಕಾರ್ಪೋರೇಷನ್ ಚುನಾವಣೆಗಳು ಹತ್ತಿರವಾಗುತ್ತಿದ್ದುದನ್ನು ಗಮನಿಸಿ ತಮಿಳರ ವಿರುದ್ಧ ಚಕಾರವೆತ್ತಲಿಲ್ಲ. ಬದಲಾಗಿ ಕನ್ನಡೇತರರನ್ನು ಸಮರ್ಥಿಸುವ ಹಾಗೂ ತಮಿಳರಿಗೆ ಕನ್ನಡಿಗರಿಂದಲೆ ಹಿಂಸೆಗಳಾದವು ಎಂಬಂತೆ ವರ್ತಿಸಿದರು. ಕನ್ನಡೇತರರ ಓಟುಗಳೆ ಕನ್ನಡದ ರಾಜಕಾರಣಿಗಳ ರಾಜಕಾರಣದ ಭವಿಷ್ಯ ಎಂದು ಭಾವಿಸಲಾಗಿತ್ತು.

### ೫.೨.೧೯ ಮಹಾಜನ್ ವರದಿಯ ವಿರುದ್ಧ ಪ್ರತಿಭಟನೆ

ಉತ್ತರ ಕರ್ನಾಟಕದಲ್ಲಿ ಮಹಾಜನ್ ವರದಿಯು ತೀವ್ರವಾದ ಚರ್ಚೆಗೆ ಗುರಿಯಾಗಿತ್ತು. ಅಲ್ಲಿನ ಕನ್ನಡಪರವಾದ ಸಂಘಟನೆಗಳು, ಚಳವಳಿಕಾರರು ವರದಿಯನ್ನು ಎರಡೂ ರಾಜ್ಯಗಳು ಒಪ್ಪಿಕೊಳ್ಳುವುದು ಸೂಕ್ತವೆಂದು ಸೂಚಿಸಿದವು. ಈ ವರದಿ ಪ್ರಕಾರ ಜತ್, ಅಕ್ಕಲಕೋಟೆ, ಕಾಸರಗೋಡುಗಳು[೧೩] ಕರ್ನಾಟಕಕ್ಕೆ ಸೇರಬೇಕು. ನಿಪ್ಪಾಣಿ, ಖಾನಾಪುರ, ಹಳಿಯಾಳಗಳು ಮಹಾರಾಷ್ಟ್ರಕ್ಕೆ ಸೇರಬೇಕೆಂದು ಹೇಳಲಾಯಿತು. ಅಲ್ಲದೆ ಬೆಳಗಾವಿ ಕನ್ನಡದ ಪ್ರದೇಶವಾದ್ದರಿಂದ ಅದನ್ನು ಕರ್ನಾಟಕದಲ್ಲಿಯೇ ಉಳಿಸಲಾಗಿತ್ತು. ಆದರೆ ಮಾತಿಗೆ ತಪ್ಪಿದ ಮರಾಠಿಗರು ಈ ವರದಿಯನ್ನು ಒಪ್ಪಿಕೊಳ್ಳಲಿಲ್ಲ. ಒಪ್ಪಿಕೊಳ್ಳುವುದಾಗಿ ಸಮಿತಿಯ ಮುಂದೆ ಹೇಳಿಕೊಂಡಿದ್ದರು. ಆದರೆ ಈ ಹೊತ್ತಿಗೂ ಅವರು ಒಪ್ಪಿಕೊಳ್ಳುತ್ತಿಲ್ಲವಾದ್ದರಿಂದ ಗಡಿ ಸಮಸ್ಯೆ ಹಾಗೆಯೆ ನೆನೆಗುದಿಗೆ ಬಿದ್ದಿದೆ. ಈ ಕುರಿತಂತೆ ಒತ್ತಾಯಿಸಿ ನಾಡಿನಾದ್ಯಂತ ಚಳವಳಿ ಜಾರಿಗೆ ಬಂದಿತು. ೧೯೭೦ರ ಕೊನೆಯವರೆಗೂ ಮಹಾಜನ್ ವರದಿಯ ಅನುಷ್ಠಾನಕ್ಕಾಗಿ ರಸ್ತೆ ತಡೆ, ರೈಲು ತಡೆ, ಸಭೆ, ಮೆರವಣಿಗೆ, ಪ್ರತಿಭಟನೆಗಳು ಚಾಲ್ತಿಯಲ್ಲಿದ್ದವು. ಬೆಂಗಳೂರಿನಲ್ಲಿ ೧೯೭೦ರ ಡಿಸೆಂಬರ್ ೧೩ರಂದು ನಡೆದ ರೈಲು ತಡೆಯ ಘಟನೆ ಚಾರಿತ್ರಿಕವಾಗಿ ದಾಖಲು ಆಗುವಂಥದ್ದು.

### ೫.೨.೨೦ ಮು. ಗೋವಿಂದರಾಜು ಆತ್ಮಾರ್ಪಣೆ

ಮರಾಠಿಗರ ಆಕ್ರಮಣಕಾರಿ ಪ್ರವೃತ್ತಿಗಳು ದೆಹಲಿಯ ರಾಜಕಾರಣದ ಮೇಲೂ ಪ್ರಭಾವ ಬೀರದೆ ಇರಲಿಲ್ಲ. ಯಶವಂತರಾವ್ ಚವ್ಹಾಣ್‌ರು ಮರಾಠಿಗರ ಪರವಾಗಿ ಪ್ರಧಾನಿ ಲಾಲ್‌ಬಹದೂರ್‌ಶಾಸ್ತ್ರಿ ಅವರೊಂದಿಗೆ ಪಿತೂರಿ ನಡೆಸುತ್ತಿದ್ದುದು ಕನ್ನಡಿಗರನ್ನು ಕೆರಳಿಸಿತ್ತು. ಕನ್ನಡಿಗರಿಗೆ ತಮ್ಮ ಪ್ರತಿಭಟನೆಗಳು ಅಸಹಾಯಕವಾಗಿ ಕಾಣಲಾರಂಭಿಸಿದವು. ದೆಹಲಿಯ ಪಾರ್ಲಿಮೆಂಟಿನ ಉಭಯ ಸದನಗಳಲ್ಲೂ ಬೆಳಗಾವಿ ಸಮಸ್ಯೆಯ ನಿರ್ಣಯವು ಮಂಡಿತವಾಗಿ ಚರ್ಚೆಗೆ ಬರುತ್ತದೆಯೆಂಬ ಸುದ್ದಿ ಕನ್ನಡ ಪಕ್ಷದ ಕಾರ್ಯಕರ್ತರಿಗೆ ತಿಳಿದುಬಂದಿತು. ಕೇಂದ್ರದ ಮಲತಾಯಿ ಧೋರಣೆಯನ್ನು ಪ್ರತಿಭಟಿಸಿ, ಕನ್ನಡಿಗರ ಅಸ್ತಿತ್ವವನ್ನು ಉಳಿಸಿಕೊಳ್ಳಲು ಚಳವಳಿಗಾರರು ಭಿನ್ನವಾದ ಆಲೋಚನೆಗಳನ್ನು ಮಾಡತೊಡಗಿದರು. ಅದರಲ್ಲಿ ದೇಶದಾದ್ಯಂತ ಸುದ್ದಿ ಮಾಡುವಂಥ ರೈಲು ತಡೆ ಚಳವಳಿಯೂ ಒಂದು. ಅದರಂತೆ ೧೩-೧೨-೧೯೭೦ರ ಬೆಳಗ್ಗೆ (ಭಾನುವಾರದ ಬೆಳಗ್ಗೆ) ೧೦ ಗಂಟೆಗೆ ಶ್ರೀರಾಮಪುರದ ಮೊದಲನೆಯ ಬ್ರಿಡ್ಜ್ ಬಳಿ (ಸ್ವತಂತ್ರ ಪಾಳ್ಯ) 'ಕರ್ನಾಟಕ ಎಕ್ಸ್‌ಪ್ರೆಸ್' ರೈಲನ್ನು ತಡೆದು ನಿಲ್ಲಿಸುವುದು ಎಂದು ನಿರ್ಧಾರವಾಯಿತು. ಮೊದಲ ದಿನದ ತಡೆಗಾಗಿ ಐದು ಜನರು ಆಯ್ಕೆ ಆಗಿದ್ದರು. ಅವರಲ್ಲಿ ಮು. ಗೋವಿಂದರಾಜು ಅವರನ್ನೊಳಗೊಂಡಂತೆ ಕ. ಮು. ಸಂಪಂಗಿರಾಮಯ್ಯ, ಕರ್ಲಮಂಗಲಂ ಶಂಕರಪ್ಪ, ಜಗದೀಶ ರೆಡ್ಡಿ, ಬೆ. ತಿ. ರಾಜಣ್ಣ ಪ್ರಮುಖರು. ಈ ಐವರು ಕನ್ನಡ ಬಾವುಟದೊಂದಿಗೆ ರೈಲು ಹಳಿಗಳ ಮೇಲೆ ಅಡ್ಡಲಾಗಿ ಮಲಗಿದರು. ಆರಂಭದಲ್ಲಿ ಮಲಗಿದ ಕ. ಮು. ಸಂಪಂಗಿರಾಮಯ್ಯ ಮತ್ತು ಕರ್ಲಮಂಗಲಂ ಅವರುಗಳನ್ನು ಡ್ರೈವರ್ ಬ್ರೇಕ್ ಹಾಕಲಾಗಿ ಇಂಜಿನಿನ ಬಂಪರ್ ಪಕ್ಕಕ್ಕೆ ಸರಿಸಿತು. ಆದರೆ ಅನಂತರ ಉದ್ದುದ್ದವಾಗಿ ಮಲಗಿದ್ದ ಮು. ಗೋವಿಂದರಾಜು ಅವರು ತಮ್ಮ ಪ್ರಾಣವನ್ನೇ ಈ ಚಳವಳಿಗಾಗಿ ಮುಡಿಪಿಟ್ಟರು.[೧೪] ಈ ಸುದ್ದಿ ದೇಶದಾದ್ಯಂತ ಪತ್ರಿಕೆಗಳಲ್ಲಿ

ಪ್ರಕಟವಾಗುವುದರೊಂದಿಗೆ ಸರ್ಕಾರ ಬೆಳಗಾವಿ ಸಮಸ್ಯೆಗೆ ಕೈಹಾಕದಂತೆ ಆಯಿತು. ಕನ್ನಡ ಚಳವಳಿಯ ಚರಿತ್ರೆಯಲ್ಲಿ ಈ ಆತ್ಮಾರ್ಪಣೆಯ ಘಟನೆ ಮುಖ್ಯವಾದುದು.

**ಟಿಪ್ಪಣಿಗಳು**

೧. ಪ್ರಭಾಕರ್. ಸಾ., (ಸಂ) ಅ.ನ.ಕೃ ಸ್ಮರಣ ಸಂಪುಟ, (ಮೈ, ೧೯೯೭) ಪು-೧೭೧-೨.

೨. ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ 'ಕೀರ್ತನ ಕೇಸರಿ' ಎಂಬ ಬಿರುದಿತ್ತು. ಅದನ್ನು ಅ.ನ.ಕೃ ಮೊದಲಾದವರು ಶಾಸ್ತ್ರಿಗಳು 'ಕೀರ್ತನಕ್ಕೇ ಸರಿ' ಎಂಬುದಾಗಿ ಆಗಾಗ ಲೇವಡಿ ಮಾಡುತ್ತಿದ್ದರು ಎನ್ನಲಾಗಿದೆ.

೩. ವೈಕುಂಠರಾಜು, ಬಿ. ವಿ., (ಸಂ), ಸಂಪಾದಕರ ಡೈರಿ - ೧೯೮೬, (ಬೆಂ, ೧೯೯೩) ಪು. ೪೧೨. (೭-೧೨-೧೯೮೬ರ 'ವಾರ ಪತ್ರಿಕೆ'ಯಲ್ಲಿನ ಸಂಪಾದಕೀಯ).

೪. ವೈಕುಂಠರಾಜು, ಬಿ. ವಿ., (ಸಂ). ಮೇಲಿನದೆ.

೫. ಕನ್ನಡ ಬಾವುಟದ ಪ್ರಕ್ರಿಯೆಗಳನ್ನು ಹೇಳುವ ಕರಪತ್ರವೊಂದನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ.

೬. ಮ. ರಾಮಮೂರ್ತಿ ಅವರಿಂದ ರಚಿತವಾದ ಕರಪತ್ರವೊಂದರಲ್ಲಿನ ಉಲ್ಲೇಖ. ಮುಂಬಯಿ ನಗರದಲ್ಲಿ ಕನ್ನಡಿಗರ ಮೇಲಿನ ಹಿಂಸಾಕೃತ್ಯಗಳನ್ನು ಸಮರ್ಥಿಸಿ ಶಿವಸೇನೆಯ ಬಾಳಾಠಾಕ್ರೆ "ಜಬ್ ತಕ್ ಬೆಳಗಾಪಿ ನಹಿ ಮಿಲೇಗಿ, ತಬ್ ತಕ್ ಬೊಂಬಾಯಿ, ಜಲ್ತೇಹಿ ರಹೇಗಿ", ಎಂದು ಮಾತನಾಡಿದ್ದು ಇನ್ನಷ್ಟು ಲೂಟಿ, ದರೋಡೆ, ಹಿಂಸೆಗಳು ಹೆಚ್ಚಾಗುವುದರ ಬಗ್ಗೆ ಆತಂಕ ಹುಟ್ಟಿಸಿತ್ತು.

೭. ಪ್ರಕಟಣಾ ಸಮಿತಿ, ಗಡಿಯೆಡೆಗಳ ಮರಾಠಿಗರ ಬೇಡಿಕೆಗಳು, (ಬೆಂ. ೧೯೬೬).

೮. ಇಂದಿಗೂ ಬೆಂಗಳೂರಿನಲ್ಲಿ ಕನ್ನಡ ಸೇನಾನಿ 'ರಾಮಮೂರ್ತಿ ಕನ್ನಡ ಬಳಗ' ಎಂಬ ಸಂಘಟನೆ ಇದೆ. ಕಳೆದ ಇಪ್ಪತ್ತೈದು ವರ್ಷಗಳಿಂದಲೂ ನಾಡು-ನುಡಿಗಾಗಿ ಈ ಸಂಘಟನೆ ತನ್ನನ್ನು ತಾನು ತೊಡಗಿಸಿಕೊಂಡಿರುವ ದಾಖಲೆಗಳು ಇವೆ. ಇದರ ಅಧ್ಯಕ್ಷರು ವೆ. ಶ್ರೀನಿವಾಸ ಎಂಬ ಕನ್ನಡ ಕಾರ್ಯಕರ್ತ.

೯. ಚಂದ್ರಣ್ಣಗೌಡ, ಕೆ. ವಿ., (ಪ್ರ. ಸಂ), ರಾಜಧಾನಿ, (ಸ್ಮರಣ ಸಂಚಿಕೆ), (ಬೆಂ, ೧೯೯೩) ಇದರಲ್ಲಿ ಕನ್ನಡ ಚಳವಳಿಗಾರ ಕೋಡಿ ಹೊಸಹಳ್ಳಿ ರಾಮಣ್ಣ ಅವರ 'ಕನ್ನಡ ಚಳವಳಿಯ ಆರಂಭಿಕ ಘಟ್ಟ' ಎಂಬ ಲೇಖನವನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ. ಪು-೬೦.

೧೦. ಕನ್ನಡ ಚಳವಳಿ ವಿಚಾರಗಳಿಗೆ ಸಂಬಂಧಿಸಿದ ಈ ಕರಪತ್ರವನ್ನು ಹಂಚಿದವರ ಬಗ್ಗೆ "ಇಂತು, ಕನ್ನಡದ ಹಿತರಕ್ಷಕರು, ಭಾಷೆಗೆ ತಪ್ಪದ ರಾಯರ ಗಂಡರು" ಎಂದು ಮುದ್ರಿಸಲಾಗಿದೆ.

೧೧. ಕನ್ನಡ ಬಾವುಟದ ಗೊಂದಲಗಳನ್ನು ಬಗೆಹರಿಸಿಕೊಳ್ಳಲು ಕನ್ನಡ ಚಳಗಾರರು, ಕಾರ್ಯಕರ್ತರು ಹಂಚಿದ ಕರಪತ್ರವನ್ನು (೧೯೬೮ ರಲ್ಲಿ) ಉಲ್ಲೇಖಿಸಲಾಗಿದೆ.

೧೨. ಅಶೋಕ ದೊಡ್ಡಮೇಟಿ., ಮಹಾಜನ್ ವರದಿ ಏನಾಗುತ್ತದೆ? (ಹು. ೧೯೭೦). ಅಶೋಕ್ ಅವರು 'ಪ್ರಪಂಚ' (ದಿನಾಂಕ ೧೫-೨-೧೯೭೦) ವಾರಪತ್ರಿಕೆಯಲ್ಲಿ ಪ್ರಕಟಿಸಿರುವ ಲೇಖನ. ಇದರಲ್ಲಿ 'ಅಕಾಲಿಕ ತಾಳವಾಡಿ ಚಳುವಳಿ' ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಿದ್ದಾರೆ.

೧೩. ಅಂದಿನ ಮೈಸೂರು ಸರ್ಕಾರವು 'Mahajan report on kasargod - is it realy Ex-parte?' ಎಂಬ ಶೀರ್ಷಿಕೆಯಡಿಯಲ್ಲಿ ಸಣ್ಣ ಪುಸ್ತಿಕೆಯನ್ನು ಪ್ರಕಟಿಸಿದೆ. (ಬೆಂ, ೧೯೬೮). ಇದರಲ್ಲಿ ಕಾಸರಗೋಡು ಹೇಗೆ ಕನ್ನಡ ಪ್ರದೇಶವಾಗುತ್ತದೆಯೆಂದು ಸಮರ್ಥಿಸುವ ಉಲ್ಲೇಖಗಳನ್ನು ನೀಡಲಾಗಿದೆ.

೧೪. ಸಿದ್ಧಲಿಂಗಯ್ಯ., ಊರು-ಕೇರಿ, (ಬೆಂ, ೧೯೯೬). ಇವರು ಕನ್ನಡದ ಹಿತಕ್ಕಾಗಿ ದುಡಿಯುತ್ತಿದ್ದ 'ತಮಿಳಿಗ'ನೆಂದು ಸಿದ್ಧಲಿಂಗಯ್ಯನವರು ಬರೆದಿದ್ದಾರೆ, ಪು-೭೫.

❑❑

## ೬.೧.೧ ಚಳವಳಿಯ ವಿಭಿನ್ನ ಹಂತಗಳು

### ೬.೨.೧ ರಾಜಕಾರಣದ ಮುನ್ನಡೆ ಮತ್ತು ಕನ್ನಡ ಚಳವಳಿಯ ಹಿನ್ನಡೆ

ಕನ್ನಡ ಚಳವಳಿಯು ೧೯೭೦ರ ದಶಕದಿಂದೀಚೆಗೆ ಪೂರ್ಣ ಪ್ರಮಾಣದಲ್ಲಿ ರಾಜಕಾರಣದ ಕಬಂಧ ಬಾಹುಗಳಲ್ಲಿ ಸಿಲುಕಿಕೊಂಡಿತು. ಹೀಗಾಗಿ ಕನ್ನಡ ಚಳವಳಿಗಾರರು, ಕಾರ್ಯಕರ್ತರು ಹಾಗೂ ಅವರ ಸಂಘಟನೆಗಳು ವಿಘಟನೆಯ ಹಾದಿ ಹಿಡಿದವು. ರಾಜಕಾರಣದಲ್ಲಿ ಜಾತಿಯತೆ, ಜಾತಿಗಳ ಧ್ರುವೀಕರಣ, ವ್ಯಕ್ತಿಗತ ಪ್ರತಿಷ್ಠೆಗಳು, ಮೂಲ ಪಕ್ಷಗಳನ್ನು ಒಡೆದು ಹೊಸ ಪಕ್ಷಗಳ ಹುಟ್ಟಿಗೆ ಕಾರಣವಾಗುವುದು ಸಹಜ ಪ್ರಕ್ರಿಯೆ. ಅದೇ ರೀತಿಯ ಪ್ರಕ್ರಿಯೆಗಳು ಕನ್ನಡ ಚಳವಳಿಯಲ್ಲಿಯೂ ಕಾಣಿಸಿಕೊಂಡವು. ಇದಕ್ಕೆ ಕಾರಣ ಚಳವಳಿ ನಾಯಕ ಪ್ರಮುಖರಲ್ಲಿದ್ದ ರಾಜಕೀಯ ಬಲವನ್ನು ಹೊಂದುವ ಬಯಕೆ ಹಾಗೂ ಅಗ್ಗದ ಜನಪ್ರಿಯತೆಯನ್ನು ಗಳಿಸುವ ಆಮಿಷಗಳು. ೧೯೬೦ರ ದಶಕವು ಕನ್ನಡ ಚಳವಳಿ ಚರಿತ್ರೆಯಲ್ಲಿ 'ಸಂಘಟನೆಯ ದಶಕ'ವಾದರೆ, ೧೯೭೦ರ ದಶಕವು ಹಿಂದಿನ ಸಂಘಟನೆಗಳನ್ನು ಒಡೆದು ಹಾಕಿದ 'ವಿಘಟನೆಯ ದಶಕ'ವಾಗಿ ದಾಖಲಾಗಿದೆ. ರಾಜಕಾರಣದ ಭರಾಟೆಯಲ್ಲಿ ಕನ್ನಡ ಚಳವಳಿಯು ಹಿನ್ನಡೆಯನ್ನು ಹೊಂದಲೇ ಬೇಕಾದ ಅನಿವಾರ್ಯತೆ ಸೃಷ್ಟಿ ಆಯಿತು.

### ೬.೩.೧ ವಾಟಾಳ್ ನಾಗರಾಜ್ ಮತ್ತು 'ಕನ್ನಡ ಚಳವಳಿ ಪಕ್ಷ'

೧೯೭೦ರ ಕೊನೆಯಲ್ಲಿ ಮಹಾಜನ್ ವರದಿಯನ್ನು ಕುರಿತ ಪ್ರತಿಭಟನೆಗಳು ನಡೆಯುತ್ತಿದ್ದವು. ಇದೇ ಸಂದರ್ಭದಲ್ಲಿ ಕಾರ್ಪೊರೇಷನ್ ಚುನಾವಣೆಗಳ ಬಗ್ಗೆ ಘೋಷಣೆ ಹೊರಬಿತ್ತು. ಶಾಸಕ ವಾಟಾಳ್ ನಾಗರಾಜ ಅವರು ತಮ್ಮ 'ಕನ್ನಡ ಚಳವಳಿ ಪಕ್ಷ'ದ ಅಭ್ಯರ್ಥಿಗಳನ್ನು ನಗರದ ವಿವಿಧ ಮತ ಕ್ಷೇತ್ರಗಳಲ್ಲಿ ಸ್ಪರ್ಧಿಸಲು ಆಯ್ಕೆ ಮಾಡಿದರು. ಗಮನಿಸಬೇಕಾದ ಅಂಶವೆಂದರೆ ತಾವೂ ಸಹ (ಶಾಸಕರಾಗಿದ್ದ ವಾಟಾಳ್) ಚಿಕ್ಕಪೇಟೆ ಕ್ಷೇತ್ರದಿಂದ ನಗರಸಭಾ ಚುನಾವಣೆಗೆ ಸ್ಪರ್ಧಿಸಿದ್ದು. ಎಲ್ಲೆಡೆ ಕನ್ನಡ-ಕನ್ನಡಿಗ-ಕರ್ನಾಟಕಗಳ ಬಗೆಗೆ ಕೆಲಸ ಮಾಡಿದ, ಮಾಡುವ ಅಭ್ಯರ್ಥಿಗಳಿಗೆ ಮಾತ್ರ ಮತವನ್ನು ನೀಡುವಂತೆ ಮನವಿ ಮಾಡಿಕೊಳ್ಳಲಾಯಿತು. ವಾಟಾಳ್ ಅವರು ಕನ್ನಡದ ಕೆಲಸಗಳಿಗೆ ರಾಜಕಾರಣದ ಶಕ್ತಿ, ಬೆಂಬಲ ಬೇಕೆಂದು ಮತದಾರರಲ್ಲಿ ಸ್ಪಷ್ಟಪಡಿಸಿದರು. ತಮ್ಮ ಪಕ್ಷದ ವತಿಯಿಂದ ಜಿ. ನಾರಾಯಣಕುಮಾರ್ (ಅರಳೇಪೇಟೆ), ರಾಮದಾಸ್ (ನಾಗಪ್ಪ ಬ್ಲಾಕ್), ರಾಮಕೃಷ್ಣ (ಶ್ರೀರಾಮಪುರ), ಕೆ. ಪ್ರಭಾಕರ ರೆಡ್ಡಿ (ಚಾಮರಾಜಪೇಟೆ), ಲಕ್ಕಣ್ಣ (ಗಾಯತ್ರಿ ನಗರ) ಅವರುಗಳನ್ನು ಕಣಕ್ಕೆ ಇಳಿಸಿದ್ದರು. ಫಲಿತಾಂಶ ಹೊರಬಿದ್ದಾಗ ತಮ್ಮನ್ನು ಸೇರಿಸಿಕೊಂಡಂತೆ 'ವಾಟಾಳ್ ಪಕ್ಷ'ದ ಎಲ್ಲ ಅಭ್ಯರ್ಥಿಗಳು ನಗರ ಸಭೆಗೆ ಆಯ್ಕೆ ಆಗಿದ್ದರು. ಇದರಿಂದ ಬೆಂಗಳೂರು ನಗರ ಸಭೆಯಡಿಯಲ್ಲಿ ಕನ್ನಡ ಪರವಾದ ಕೆಲಸಗಳನ್ನು ನಿರ್ವಹಿಸಲು

ಅನುಕೂಲಗಳು ಆದವು. ಅಂತೆಯೇ ನಗರ ಕಾರ್ಪೋರೇಷನ್ ಕನ್ನಡಮಯವೂ ಆಯಿತು. ಕನ್ನಡಕ್ಕೆ ಅಗ್ರಸ್ಥಾನ ನೀಡಿದ ವಾಟಾಳ್ ಪಕ್ಷದವರು ಕೇವಲ ಆಡಳಿತದಲ್ಲಿ ಅಷ್ಟೇಯಲ್ಲದೆ ಎಲ್ಲ ರಂಗಗಳಲ್ಲೂ, ವ್ಯವಹಾರಗಳಲ್ಲೂ ಮಾತೃಭಾಷೆಯನ್ನೇ ಮಾಧ್ಯಮವಾಗಿಸಿದ್ದು ಗಮನಾರ್ಹ. ಕಚೇರಿಗಳಲ್ಲಿ ಕನ್ನಡ ಟೈಪ್‌ರೈಟರ್‌ಗಳ ಬಳಕೆಗೆ ಆದ್ಯತೆ ನೀಡಲಾಯಿತು. ಇಂಥ ಕನ್ನಡದ ಸಾಧನೆಗಳ ನಡುವೆಯು ವಾಟಾಳ್ ಪಕ್ಷದವರಲ್ಲಿ ಭಿನ್ನಾಭಿಪ್ರಾಯಗಳು ಕಾಣಿಸಿಕೊಳ್ಳದೆ ಹೋಗಲಿಲ್ಲ. ಅಸಮಾಧಾನವನ್ನು ವ್ಯಕ್ತಪಡಿಸಿದವರ ಪೈಕಿ ವಾಟಾಳ್‌ರ ನಿಕಟವರ್ತಿ ಆಗಿದ್ದ ಜಿ. ನಾರಾಯಣ ಕುಮಾರ್ ಪ್ರಮುಖರು. ೧೯೭೨ರ ವರೆಗೂ ನಗರ ಸಭೆಯ ಚುನಾವಣೆಗಳಲ್ಲಿ (ಮೂರು ಬಾರಿ) ಸತತವಾಗಿ ವಾಟಾಳರೆ ಸ್ಪರ್ಧಿಸಿದ್ದು ಇವರ ಅಸಮಾಧಾನಕ್ಕೆ ಕಾರಣ ಆಗಿತ್ತು. ಬೇರೆಯವರಿಗೆ ಅವಕಾಶ ನೀಡದ ವಾಟಾಳರ ಧೋರಣೆ ಜಿ. ನಾರಾಯಣ ಕುಮಾರ್ ಅವರಿಗೆ ಸರಿಕಂಡಿರಲಿಲ್ಲ. ಬಹುಶಃ ವಾಟಾಳರು ಸತತವಾಗಿ ಹೀಗೆ ಸ್ಪರ್ಧಿಸುತ್ತಿದ್ದುದಕ್ಕೆ ಅವರಿಗೆ ಡೆಪ್ಯುಟಿ ಮೇಯರ್ ಹುದ್ದೆಯ ಮೇಲಿದ್ದ ಬಯಕೆಯೇ ಕಾರಣವಿರಬಹುದು ಎನ್ನಲಾಗಿದೆ.[೧] ಆದರೆ ಈ ಹುದ್ದೆ ಅವರಿಗೆ ದೊರೆಯಲೇ ಇಲ್ಲ. ಪರಿಸ್ಥಿತಿಗಳನ್ನು ಗ್ರಹಿಸಿದ ವಾಟಾಳ್ ಅವರು ಮತ್ತೆ ೧೯೭೨ರ ವಿಧಾನಸಭಾ ಚುನಾವಣೆಗೆ ಸ್ಪರ್ಧಿಸುವ ಸಿದ್ಧತೆಗಳಲ್ಲಿ ತಲ್ಲೀನರಾದರು.

ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರದಿಂದ ವಾಟಾಳ್ ೧೯೭೨ರಲ್ಲಿ ಆರಿಸಿ ಬಂದರು. ಆದರೆ ಇವರಿಂದ ಪರಾಭವಗೊಂಡಿದ್ದ ದಯಾನಂದ ಸಾಗರ್ ಅವರು ವಾಟಾಳರ ಆಯ್ಕೆಯನ್ನು ಪ್ರಶ್ನಿಸಿ ತಕರಾರು ಅರ್ಜಿ ಸಲ್ಲಿಸಿದ್ದು ಬೇರೆ ಪರಿಣಾಮಗಳಿಗೆ ಎಡೆಮಾಡಿಕೊಟ್ಟಿತು. ಈ ತಕರಾರಿಗೆ ಪೂರಕ ಸಾಕ್ಷಿ-ಆಧಾರಗಳನ್ನು ಹೊಂದಿಸಿಕೊಟ್ಟವರು ವಾಟಾಳರ ನಿಕಟವರ್ತಿ ಆಗಿದ್ದ ಸ. ಕೃ. ಸಂಪಂಗಿ. ಅಧ್ಯಯನ ಮಾಡಿದ ರಾಜ್ಯ ಹೈಕೋರ್ಟ್ ವಾಟಾಳರ ಆಯ್ಕೆಯನ್ನೇ ಅನೂರ್ಜಿತಗೊಳಿಸಿತು. ಅಲ್ಲದೆ ಆರು ವರ್ಷಗಳ ಕಾಲ ಚುನಾವಣೆಯಲ್ಲಿ ಭಾಗವಹಿಸದಂತೆ ಬಹಿಷ್ಕಾರವನ್ನೂ ಹಾಕಿತು. ಹೀಗಾಗಿ ವಾಟಾಳರು ಸುಪ್ರಿಂಕೋರ್ಟಿಗೆ ದಾವೆ ಹೂಡಿದ್ದುಂಟು. ಪರಿಣಾಮವಾಗಿ ದಯಾನಂದ ಸಾಗರರ ಆಯ್ಕೆಯನ್ನು (ಕರ್ನಾಟಕ ಹೈಕೋರ್ಟಿನ ತೀರ್ಪನ್ನು) ರದ್ದುಪಡಿಸಿ ಸುಪ್ರಿಂಕೋರ್ಟ್ ಆ ಕ್ಷೇತ್ರದಲ್ಲಿ ಮರು ಚುನಾವಣೆಗೆ ಆದೇಶ ನೀಡಿತು. ಈ ವೇಳೆಗಾಗಲೇ ವಾಟಾಳರಿಗೆ ತಮ್ಮ ಪಕ್ಷದಲ್ಲಿಯೆ ಪ್ರತಿಸ್ಪರ್ಧಿಗಳು ಹುಟ್ಟಿಕೊಂಡಿದ್ದರು. ಅಂಥ ಪ್ರಮುಖರಲ್ಲಿ ಜಿ. ನಾರಾಯಣ ಕುಮಾರ್ ಅವರು ಪ್ರಮುಖರಾಗಿದ್ದು, ಹೆಚ್ಚು ಜನಪ್ರಿಯತೆಯನ್ನು ಗಳಿಸತೊಡಗಿದ್ದರು.

**೬.೩.೨ ನಾಡಿನ ಹೆಸರು 'ಕರ್ನಾಟಕ'**

೧೯೭೩ರಲ್ಲಿ ದೇವರಾಜ ಅರಸು ಅವರು 'ವಿಶಾಲ ಮೈಸೂರು ರಾಜ್ಯ'ದ ಮುಖ್ಯಮಂತ್ರಿಗಳಾದರು. ನಾಡಿನ ಎಲ್ಲ ಜನರ ಬಹಳ ವರುಷಗಳ ಹಿಂದಿನ ಕನಸಾಗಿದ್ದ (೧೯೫೬ ರಿಂದಲೂ) 'ಕರ್ನಾಟಕ' ಎಂಬ ಹೆಸರನ್ನಿಟ್ಟು ೧-೧೧-೧೯೭೩ರಂದು ನಾಮಕರಣ ಮಾಡಲಾಯಿತು. ಹಲವು ಸಂಘ-ಸಂಸ್ಥೆಗಳ ಒತ್ತಾಯ, ಸಾಹಿತ್ಯ ಸಮ್ಮೇಳನಗಳಲ್ಲಿನ ಠರಾವುಗಳು, ಉತ್ತರ ಕರ್ನಾಟಕದವರ ಅಸಮಾಧಾನಗಳು 'ಕರ್ನಾಟಕ' ಎಂದು ಹೆಸರಿಡಲು ಅನುವು ಮಾಡಿಕೊಟ್ಟಿದ್ದವು. 'ವಿಶಾಲ ಮೈಸೂರು ರಾಜ್ಯ' ವೆಂದೇ ಉಳಿಸಿಕೊಳ್ಳಲು ಕೆಲವು ಮೈಸೂರಿಗರು ಹಠ ತೊಟ್ಟಿದ್ದರು. ರಾಜ್ಯದ ಹೆಸರು

'ಕರ್ನಾಟಕ'ವೆಂದೇ ಏಕೆ ಆಗಬೇಕು ಎಂದು ದೊಡ್ಡಮೇಟಿ ಅಂದಾನಪ್ಪ ಅವರು ಕೃತಿಯೊಂದನ್ನು ರಚಿಸಿ ಹಂಚಿದ್ದುಂಟು.[೨] ದೊಡ್ಡಮೇಟಿ ಮೊದಲಾದವರ ಸತತ ಪ್ರಯತ್ನ, ಸಾಹಿತಿ-ಕಲಾವಿದರ ಒತ್ತಾಸೆಗಳಿಂದ ದೇವರಾಜ ಅರಸು ಅವರು ಆರಂಭದಲ್ಲಿ ಒಪ್ಪದಿದ್ದರೂ ಅನಂತರ ಒಪ್ಪುವುದರ ಮೂಲಕ ರಾಜ್ಯಕ್ಕೆ 'ಕರ್ನಾಟಕ' ಎಂದು ಹೆಸರಿಟ್ಟರು. ನಾಮಕರಣವಾದ ಮರುವರುಷವೆ (೧೯೭೪ರಲ್ಲಿ) ಮೈಸೂರಿನಲ್ಲಿ ಕುವೆಂಪು ಅವರು 'ಕರ್ನಾಟಕ ಲೇಖಕ ಮತ್ತು ಕಲಾವಿದರ ಒಕ್ಕೂಟ'ವನ್ನು ಉದ್ಘಾಟಿಸಿದ್ದು. ಈ ಸಂಘಟನೆ ಪ್ರಗತಿಪರವಾದ ವಿಚಾರಗಳನ್ನು ಹುಟ್ಟುಹಾಕುವಲ್ಲಿ ಶ್ರಮಿಸಿತು. (ಉದಾಹರಣೆಗೆ 'ಬೂಸಾ ಚಳವಳಿ' ಇತ್ಯಾದಿ).

### ೬.೩.೩ 'ಕನ್ನಡ ಚಳವಳಿ ವಾಟಾಳ್ ಪಕ್ಷ'ದಲ್ಲಿ ಬಿರುಕು

೧೯೭೪ರಲ್ಲಿ ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಮರುಮತದಾನ ನಡೆಯಿತು. ಈ ಚುನಾವಣೆಗೆ ವಾಟಾಳರು ತಮ್ಮ ಪಕ್ಷದ ಜಿ. ನಾರಾಯಣ ಕುಮಾರ್ ಅವರನ್ನು ಕಣಕ್ಕೆ ಇಳಿಸಲಿಲ್ಲ. ಬದಲಾಗಿ ಇನ್ನೊಬ್ಬ ನಿಕಟವರ್ತಿ ಕೆ. ಪ್ರಭಾಕರ ರೆಡ್ಡಿ ಅವರನ್ನು ನಿಲ್ಲಿಸಿ ಗೆಲ್ಲಿಸಿದರು. ಇದರಿಂದ ಜಿ. ನಾರಾಯಣ ಕುಮಾರ್ ಹಾಗೂ ಇತರೆ ಬೆಂಬಲಿಗರು ವಾಟಾಳರ ಚಳವಳಿ ಪಕ್ಷವನ್ನು ತೊರೆದು ಹೊರಬಂದರು. ಜಿ. ನಾರಾಯಣ ಕುಮಾರ್ ಗೊಲ್ಲ ಜನಾಂಗಕ್ಕೆ ಸೇರಿದವರಾಗಿದ್ದರು. ಹಿಂದುಳಿದ ವರ್ಗಗಳವರನ್ನು ಪ್ರೋತ್ಸಾಹಿಸುತ್ತಿದ್ದ ದೇವರಾಜ ಅರಸರು ಸಹಜವಾಗಿಯೇ ನಾರಾಯಣ ಕುಮಾರರನ್ನು ಬೆಂಬಲಿಸಿದ್ದುಂಟು. ವಾಟಾಳ್ ನಾಗರಾಜರ ಸರ್ವಾಧಿಕಾರತ್ವವನ್ನು ಪ್ರತಿಭಟಿಸಿದ ಪ್ರಭಾಕರ ರೆಡ್ಡಿ ಅವರಿಗೆ ಕನ್ನಡ ಚಳವಳಿ ಪಕ್ಷದಲ್ಲಿ ಮುಂದುವರೆಯುವುದು ದುಸ್ತರವೆನಿಸಿತು. ಆ ಪಕ್ಷದಿಂದ ಹೊರಬಂದು ೧೯೭೮ರ ಚುನಾವಣೆಯಲ್ಲಿ 'ಜನತಾಪಕ್ಷ'ದಿಂದ ಸ್ಪರ್ಧಿಸಿದರು. ಆದರೆ ಪ್ರಭಾಕರ ರೆಡ್ಡಿ ಗೆಲ್ಲಲು ಆಗಲಿಲ್ಲ. ಹೀಗೆ ವಾಟಾಳ್ ಆಪ್ತರು ಕನ್ನಡ ಚಳವಳಿ ಪಕ್ಷದಿಂದ ಹೊರಗಡೆ ಹೋಗಿ ಪ್ರತ್ಯೇಕ ಬಣಗಳಲ್ಲಿ ಹಂಚಿಹೋದರು. ಇದರಿಂದ ರಾಜಕಾರಣದ ಮುನ್ನಡೆ ಯಾಯಿತು. ಆದರೆ ಕನ್ನಡ ಚಳವಳಿ ಹಿನ್ನಡೆಯಿತು. ಇಂಥ ಪರಿಸ್ಥಿತಿಗಳಿಂದ ಬೆಂಗಳೂರಿನಲ್ಲಿ ಕನ್ನಡೇತರರ ಪ್ರಾಬಲ್ಯ ಮತ್ತೆ ಹೆಚ್ಚಾಗದೆ ಇರಲಿಲ್ಲ. ೧೯೭೮ರ ಚುನಾವಣೆಯಲ್ಲಿ ತಾವು ಭಾಗವಹಿಸಲು ಸಾಧ್ಯವಿಲ್ಲದ್ದರಿಂದ ವಾಟಾಳ್ ಅವರು ತಮ್ಮ ಶ್ರೀಮತಿ ಅವರನ್ನು ಚಿಕ್ಕಪೇಟೆ ಮತ್ತು ಬಿನ್ನಿಪೇಟೆ ಎರಡೂ ಕ್ಷೇತ್ರಗಳಲ್ಲೂ ಕಣಕ್ಕೆ ಇಳಿಸಿದರು. ಆದರೆ ಈ ಎರಡೂ ಕ್ಷೇತ್ರಗಳಲ್ಲೂ ಅವರು ಗೆಲ್ಲಲು ಸಾಧ್ಯವಾಗಲಿಲ್ಲ. ಇಂಥ ಸೋಲುಗಳ ನಡುವೆ ವಾಟಾಳರು ಕನ್ನಡದ ಸಮಸ್ಯೆಗಳಿಗೆ ವಿಭಿನ್ನ ರೀತಿಗಳಲ್ಲಿ ಸ್ಪಂದಿಸಿ ಸುದ್ದಿಯಲ್ಲಿ ಇರಲು ಪ್ರಯತ್ನಿಸಿದರು. ಅವರ ಪಕ್ಷವು ೧೯೮೦ರ ವೇಳೆಗೆ 'ಕನ್ನಡ ಚಳವಳಿ ವಾಟಾಳ್ ಪಕ್ಷ'ವಾಗಿಯೇ ಗುರುತಿಸಿಕೊಂಡಿತು. ಈ ಪಕ್ಷದಲ್ಲಿ 'ವಾಟಾಳ್' ಹೆಸರು ಸೇರಿದ್ದು ಕೆಲವು ಕಾರ್ಯಕರ್ತರಿಗೆ ತೃಪ್ತಿ ತಂದಿರಲಿಲ್ಲ. ಅದನ್ನು ಕೇವಲ 'ಕನ್ನಡ ಚಳವಳಿ ಪಕ್ಷ'ವಾಗಿಯೇ ಗುರುತಿಸುವುದಾದರೆ ಪ್ರಾದೇಶಿಕ ಪಕ್ಷವೊಂದನ್ನು ಬಲಪಡಿಸಲು ತಾವೆಲ್ಲರೂ ಬೆಂಬಲಿಸುವುದಾಗಿ ಹೇಳಿದರು. ಆದರೆ ವಾಟಾಳ್ ನಾಗರಾಜರು ತಾವು ನಿರ್ಮಿಸಿದ ಪಕ್ಷವಾದ್ದರಿಂದ 'ವಾಟಾಳ್' ಎಂಬ ಹೆಸರನ್ನು ತೆಗೆದುಹಾಕಲು ಒಪ್ಪಲಿಲ್ಲ. ಹೀಗಾಗಿ ಬಹಳಷ್ಟು ಚಳವಳಿಗಾರರು ವಾಟಾಳರಿಂದ ದೂರವಾದರು ಎನ್ನಲಾಗಿದೆ.[೩]

೧೯೮೦ರ ವೇಳೆಗೆ ಕನ್ನಡ ಚಳವಳಿಯಲ್ಲಿದ್ದ ನಾಯಕ ಪ್ರಮುಖರು ರಾಜಕಾರಣ, ಜಾತೀಯತೆ, ಸ್ವಾರ್ಥ ಧೋರಣೆಗಳಿಂದ ಚಳವಳಿಯನ್ನು ಒಡೆದರು. ಇದರಿಂದ ಪ್ರಾಮಾಣಿಕವಾಗಿದ್ದ ಕನ್ನಡ ಕಾರ್ಯಕರ್ತರಿಗೆ ಹಾಗೂ 'ಕನ್ನಡ'ಕ್ಕಾಗಿಯೆ ತೊಡಗಿಸಿಕೊಂಡಿದ್ದ ಚಳವಳಿಗಾರರಿಗೆ ಹೆಚ್ಚಿನ ಅಸಮಾಧಾನ ಉಂಟಾಯಿತು. ಚಳವಳಿಯು ವಿಘಟನೆಯ ಹಾದಿ ಹಿಡಿದದ್ದೇ ಕೆಲವು ಕನ್ನಡೇತರ ಸಂಘಟನೆಗಳಿಗೆ ಅನುಕೂಲವಾಗಿ ಪರಿಣಮಿಸಿತು. ರಾಜಕಾರಣಿಗಳಿಗಂತು ಕನ್ನಡೇತರರ ಮತಗಳು ಬೇಕಿದ್ದವು. ಹೀಗಾಗಿ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡೇತರರ ಪ್ರಾಬಲ್ಯ ದಿನೆ ದಿನೆ ಹೆಚ್ಚಾಗುತ್ತಾ ಹೋಯಿತು.

### ೬.೪.೧ ಗೋಕಾಕ್ ಚಳವಳಿ

ಕರ್ನಾಟಕವು ಒಂದುಗೂಡಬೇಕು ಎಂಬ ಏಕೀಕರಣ ಚಳವಳಿಯನ್ನು ಹೊರತು ಪಡಿಸಿದರೆ ಮತ್ತೆ ಅಷ್ಟೇ ಪೂರ್ಣ ಪ್ರಮಾಣದಲ್ಲಿ ಹಾಗೂ ಪ್ರಭಾವಯುತವಾಗಿ ನಡೆದ ಚಳವಳಿ ಅಂದರೆ ಗೋಕಾಕ್ ಚಳವಳಿ ಮಾತ್ರ. ನಾಡಿನ ಎಲ್ಲ ಕಡೆಗಳಿಂದಲೂ ಕನ್ನಡಿಗರು ಗೋಕಾಕ್ ವರದಿಯ ಅನುಷ್ಠಾನಕ್ಕಾಗಿ ಸ್ಪಂದಿಸಿದ್ದು ಗಮನಾರ್ಹವಾದದ್ದು. ಏಕೆಂದರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ಹಾಗೂ ಅಷ್ಟೇ ವ್ಯಾಪಕವಾಗಿ ಇನ್ನಾವುದೇ ಚಳವಳಿ (ಏಕೀಕರಣದ ನಂತರ) ನಡೆದಿರಲಿಲ್ಲ. ಆದ್ದರಿಂದಲೇ ಈ ಚಳವಳಿ ಭಿನ್ನ ನೆಲೆಯಲ್ಲಿ ನಿಲ್ಲುವುದು. ಅಷ್ಟೇ ಜನಪರವಾದ ಚಳವಳಿಯೂ ಇದಾಗಿದೆ. ಭಾಷಿಕ ಮಹತ್ವವನ್ನು ಪಡೆದಿರುವ ಗೋಕಾಕ್ ಚಳವಳಿಗೆ ತನ್ನದೇ ಆದ ಚರಿತ್ರೆಯೇ ಇದೆ ಎಂದರೆ ತಪ್ಪಾಗಲಾರದು.

#### ೬.೪.೧.೧ ಚಳವಳಿಯ ಹಿನ್ನೆಲೆ

ರಾಜ್ಯದ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರ ಅಧಿಕಾರಾವಧಿಯಲ್ಲಿ (೧೯೭೯) ಶಾಲಾ ಪಠ್ಯಕ್ರಮದಲ್ಲಿನ ಭಾಷೆಗಳಿಗೆ ಸಂಬಂಧಿಸಿದಂತೆ ಸಮಸ್ಯೆ ಹುಟ್ಟಿತು. ಅದು ಪ್ರೌಢಶಾಲೆಗಳಲ್ಲಿನ 'ಭಾಷಾ ಮಾಧ್ಯಮ'ದ ವಿಚಾರಗಳನ್ನು ಕುರಿತದ್ದು. ಅದುವರೆಗಿನ ಶಿಕ್ಷಣ ನೀತಿಯ ಪ್ರಕಾರ ಕನ್ನಡ, ಇಂಗ್ಲಿಷ್, ತೆಲುಗು, ತಮಿಳು ಮೊದಲಾದ ಮಾತೃಭಾಷೆಗಳ ಜೊತೆಗೆ ಸಂಸ್ಕೃತವನ್ನು ಸಹ ಪ್ರಥಮ ಭಾಷಾ ಸ್ಥಾನದಲ್ಲಿ ಕಲಿಯಬಹುದಾಗಿತ್ತು. ಇದು ಯಾವುದೇ ಮಾಧ್ಯಮದ ಪ್ರೌಢಶಾಲಾ ವಿದ್ಯಾರ್ಥಿಗಳಿಗಾದರೂ ಅನ್ವಯ ಆಗುವಂಥದ್ದು. ಒಂದನೆಯ ತರಗತಿಯಿಂದ ತಮ್ಮ ಮಾತೃಭಾಷೆಯಲ್ಲಿ ಓದಿದವರಿಗೆ ಏಕಾಏಕಿ ಎಂಟನೆಯ ತರಗತಿಯಿಂದ ಹೊಸ ಭಾಷೆಯಾದ ಸಂಸ್ಕೃತವನ್ನು ಕಲಿಯಲು ಅನುವು ಮಾಡಿಕೊಡಲಾಗಿತ್ತು. ಅಂದರೆ ಸಂಸ್ಕೃತವನ್ನು ಮಾತೃ ಭಾಷೆಗೆ ಸರಿಸಮವೆಂದು ಪರಿಗಣಿಸುವುದು. ಕೇವಲ ಪ್ರೌಢಶಾಲೆಯಲ್ಲಿ ಓದಲು ಆರಂಭಿಸುವ ಸಂಸ್ಕೃತವು ಹಿಂದಿನ ಏಳು ವರುಷಗಳಲ್ಲಿ ಓದಿದ ಭಾಷೆಯೊಂದಕ್ಕೆ ಸಮವೆಂದು ಅಳವಡಿಸಿದ್ದರು. ಇದೊಂದು ಅವೈಜ್ಞಾನಿಕ ಶಿಕ್ಷಣ ನೀತಿ ಆಗಿತ್ತು. ಕನ್ನಡಿಗರು ಸಹ ಹೆಚ್ಚು ಅಂಕ ಗಳಿಸುವ ದೃಷ್ಟಿಯಿಂದ 'ಕನ್ನಡ'ದ ಜೊತೆಗೆ ಸಂಸ್ಕೃತವನ್ನು ಪ್ರಥಮ ಭಾಷೆಯನ್ನಾಗಿ ಕಲಿಯಲು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಅಲ್ಲದೆ ಈ ಭಾಷೆಯ ಪ್ರೋತ್ಸಾಹಕ್ಕಾಗಿ ಅಧ್ಯಾಪಕರು ಹೆಚ್ಚು ಅಂಕಗಳನ್ನು ನೀಡುತ್ತಿದ್ದುದು ಉಂಟು. ಸಂಸ್ಕೃತವನ್ನು ಆಯ್ಕೆ ಮಾಡಿಕೊಂಡವರಿಗೆ ಇನ್ನೊಂದು ಅನುಕೂಲವೂ ಇತ್ತು. ಅದೇನೆಂದರೆ ಸಂಸ್ಕೃತ ಪ್ರಶ್ನಪತ್ರಿಕೆಯನ್ನು ಕನ್ನಡ ಅಥವಾ ಇಂಗ್ಲಿಷಿನಲ್ಲಿ ಉತ್ತರಿಸುವಂಥದ್ದು. ಹೀಗಾಗಿ ವಿದ್ಯಾರ್ಥಿಗಳು ರ್‍ಯಾಂಕ್ ಗಳಿಸುವಲ್ಲಿ

ಹೆಚ್ಚಿನ ಅನುಕೂಲಗಳು ಇದ್ದವು. ಇವೆಲ್ಲದರಿಂದ ಕನ್ನಡಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನೇನು ನೀಡಿದಂತೆ ಆಗಿರಲಿಲ್ಲ. ಈ ಅವೈಜ್ಞಾನಿಕ ಭಾಷಾ ಬೋಧನ ಕ್ರಮವನ್ನು ದೇವರಾಜ ಅರಸು ಅವರ ಸರ್ಕಾರ ಆಜ್ಞೆಯೊಂದರ ಮೂಲಕ (೧೯೭೯ರ ಅಕ್ಟೋಬರ್‌ನಲ್ಲಿ) ರದ್ದುಪಡಿಸಿತು. ಅಂದರೆ ಸಂಸ್ಕೃತವನ್ನು ಪ್ರಥಮ ಭಾಷೆಗಳ ಪಟ್ಟಿಯಿಂದ ತೆಗೆದು ಹಾಕಿ, ಅದನ್ನು ಮೂರನೆಯ ಸ್ಥಾನಕ್ಕೆ ಇಳಿಸಲಾಯಿತು. ಸಂಸ್ಕೃತ ಪರವಾದಿಗಳು ಈ ಆಜ್ಞೆಯ ವಿರುದ್ಧ ಪ್ರತಿಭಟಿಸಿದರು. ಇದರಿಂದ ಕನ್ನಡ ಪರವಾದಿಗಳು ಸಂಸ್ಕೃತ ವಾದಿಗಳ ವಿರುದ್ಧ ನಿಲ್ಲುವಂತಾಯಿತು. ಈ ಎರಡೂ ಬಣಗಳ ವಾದ-ವಿವಾದಗಳು ಸರ್ಕಾರವನ್ನು ಪೇಚಿಗೆ ಸಿಲುಕಿಸಿದವು. ಸಂಸ್ಕೃತಾಭಿಮಾನಿಗಳು, ಪಂಡಿತರು ಸರ್ಕಾರದ ಕ್ರಮವನ್ನು ನ್ಯಾಯಾಲಯಕ್ಕೆ ತೆಗೆದುಕೊಂಡು ಹೋದರು. ವಿಧಾನ ಮಂಡಲದ ಎರಡೂ ಸದನಗಳಲ್ಲೂ ಈ ಕುರಿತು ಚರ್ಚೆ ಆಯಿತು. ತೀರ್ಮಾನಿಸಲಾಗದೆ ಕೊನೆಗೆ ಭಾಷಾ ತಜ್ಞರ ಸಮಿತಿಯೊಂದರಿಂದ ಸಮಸ್ಯೆಯನ್ನು ಬಗೆಹರಿಸಿಕೊಳ್ಳುವುದು ಸೂಕ್ತವೆಂದು ನಿರ್ಧರಿಸಲಾಯಿತು.

### ೬.೪.೧.೨ ಸಮಿತಿಯ ನೇಮಕ ಮತ್ತು ಪ್ರತಿರೋಧಗಳು

ಸರ್ಕಾರವು ೧೯೮೦ರ ಜುಲೈ ೫ ರಂದು ಭಾಷಾ ತಜ್ಞರ ಸಮಿತಿಯ ರಚನೆಯನ್ನು ಕುರಿತ ಆಜ್ಞೆಯೊಂದನ್ನು ಹೊರಡಿಸಿತು.[೪] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಆಜ್ಞೆಯು ಹೊರಡಿದ್ದು ಆರ್. ಗೂಂಡೂರಾಯರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ. ಅವರನ್ನು ಸಂಸ್ಕೃತಪರವಾದಿಗಳೆಂದೂ, ಸ್ವಾಮೀಜಿಯೊಬ್ಬರ ಮಾತಿನ ಮೇರೆಗೆ (ಉಡುಪಿಯ ಪೇಜಾವರ ಶ್ರೀಗಳ ಮಾತಿನ ಮೇರೆಗೆ) ಸಂಸ್ಕೃತಕ್ಕೆ ಸ್ಥಾನ-ಮಾನಗಳನ್ನು ನಿರ್ಧರಿಸಲು ಈ ಸಮಿತಿಯನ್ನು ರಚಿಸಿದ್ದರೆಂದು ಜನರಲ್ಲಿ ಗುಮಾನಿಗಳು ಹುಟ್ಟಿಕೊಂಡವು.[೫] ಅಲ್ಲದೆ ಈ ಸಮಿತಿಯ ಅಧ್ಯಕ್ಷರಾಗಿದ್ದವರು 'ಸಂಸ್ಕೃತಪರವಾದಿ'ಗಳೆಂದು ಶಂಕಿಸಲಾಗಿದ್ದ ಡಾ. ವಿ. ಕೃ. ಗೋಕಾಕ್ ಅವರು. ಉಳಿದಂತೆ ಸಮಿತಿಯ ಸದಸ್ಯರಾಗಿ ಜಿ. ನಾರಾಯಣ, ಎಸ್. ಕೆ. ರಾಮಚಂದ್ರರಾವ್, ತ. ಸು. ಶಾಮರಾವ್, ಡಾ. ಕೆ. ಕೃಷ್ಣಮೂರ್ತಿ, ಡಾ. ಎಚ್. ಪಿ. ಮಲ್ಲೇದೇವರು, ಸಾ. ಮಂಚಯ್ಯ (ಇವರು ಪದನಿಮಿತ್ತ ಸದಸ್ಯರಷ್ಟೇ) ಅವರು ಇದ್ದರು. ಇವರಲ್ಲಿ ಬಹುಪಾಲು ಸಂಸ್ಕೃತ ಪರವಾಗಿ ವಾದಿಸುವ ಬ್ರಾಹ್ಮಣರ ಸಂಖ್ಯೆಯೇ ಹೆಚ್ಚೆಂದು ಕನ್ನಡ ಪರವಾಗಿ ವಾದಿಸುತ್ತಿದ್ದವರಿಗೆ ಗುಮಾನಿ ಬಂದಿತು. ಹೀಗಾಗಿ ಈ ಸಮತಿಯ ವಿರುದ್ಧವೇ ಮೊದಲ ಪ್ರತಿಭಟನೆಗಳು ನಡೆದವು.[೬] ಬೆಂಗಳೂರಿನಲ್ಲಿ ಗೋಕಾಕ್ ಸಮಿತಿ ವಿರುದ್ಧ ಧ್ವನಿ ಎತ್ತಲಾಯಿತು.[೭] ಸರ್ಕಾರವು ಗೋಕಾಕ್ ಅವರ ಅಧ್ಯಕ್ಷತೆಯ ಸಮಿತಿಗೆ-

೧. ಸಂಸ್ಕೃತ ಶಾಲಾ ಪಠ್ಯವಸ್ತುವಿನಲ್ಲಿ ಅಭ್ಯಾಸದ ವಿಷಯವಾಗಿ ಉಳಿಯಬೇಕೆ?
೨. ಉಳಿಯಬೇಕಾದರೆ ಕನ್ನಡಕ್ಕೆ ಪರ್ಯಾಯವಾಗದೆ ಉಳಿಸುವುದು ಹೇಗೆ?
೩. ತ್ರಿಭಾಷಾ ಸೂತ್ರದಂತೆ ಕನ್ನಡ ಕಡ್ಡಾಯ ಮಾಡಿ ಉಳಿದೆರಡು ಭಾಷೆಗಳ ಆಯ್ಕೆಯ ಸ್ವಾತಂತ್ರ್ಯವನ್ನು ವಿದ್ಯಾರ್ಥಿಗಳಿಗೆ ಬಿಡುವುದು ಸೂಕ್ತವೆ?[೮]

- ಎಂಬ ಮೂರು ವಿಷಯಗಳ ಬಗ್ಗೆ ಪರಿಶೀಲನೆ, ಅಧ್ಯಯನ ನಡೆಸಿ ಮೂರು ತಿಂಗಳ ಒಳಗಾಗಿ ವರದಿ ನೀಡಲು ಸೂಚಿಸಿತ್ತು. ಅದರಂತೆ ಗೋಕಾಕ್ ಅವರು ಮೊಟ್ಟ ಮೊದಲು ಧಾರವಾಡಕ್ಕೆ ಅಭಿಪ್ರಾಯ, ಮನವಿಗಳನ್ನು ಸಂಗ್ರಹಿಸಲು ಹೊರಟರು. ಈ ವೇಳೆಗಾಗಲೇ

ಹುಬ್ಬಳ್ಳಿಯಲ್ಲಿನ 'ಕರ್ನಾಟಕ ಕ್ರಾಂತಿ ಕೂಟ'ದ ಸಂಘಟಕರು 'ಗೋಕಾಕ್ ಸಮಿತಿ' ವಿರುದ್ಧ ಧ್ವನಿ ಎತ್ತಿದರು ಎನ್ನಲಾಗಿದೆ.

### ೬.೪.೧.೩ ಧಾರವಾಡಕ್ಕೆ ಸಮಿತಿ ಮತ್ತು ಪ್ರತಿಭಟನೆ

೧೯೮೦ರ ಅಕ್ಟೋಬರ್ ೨೩ರಂದು ಧಾರವಾಡದ 'ಟ್ರೈನಿಂಗ್ ಕಾಲೇಜಿ'ನಲ್ಲಿ ಗೋಕಾಕ್ ಸಮಿತಿ ಬೈಠಕ್ ಮಾಡುವುದೆಂದು ತಿಳಿಯಿತು. ೨೩ರಂದು ಮುಂಜಾನೆ ೧೧ ಗಂಟೆಗೆ ಸಭೆ ಸೇರಿದ ಗೋಕಾಕ್ ಮತ್ತು ಸಮಿತಿಯ ಸದಸ್ಯರನ್ನು ವಿರೋಧಿಸುವ ಘೋಷಣೆಗಳು ಚಂದ್ರಶೇಖರ ಪಾಟೀಲ, ಬಸವರಾಜ ಕಟ್ಟಿಮನಿ, ಎಂ. ಎಂ. ಕಲಬುರ್ಗಿ, ಚನ್ನವೀರ ಕಣವಿ, ಗುಂಜೆಟ್ಟಿ ಮೊದಲಾದವರಿಂದ ಕಾಲೇಜಿನ ಹೊರಗಡೆ ಶುರುವಾದವು. ಇಂಥ ಪ್ರತಿಭಟನೆಗಳನ್ನು ನಿರೀಕ್ಷಿಸದಿದ್ದ ಗೋಕಾಕ್ ಅವರು ಚಂದ್ರಶೇಖರ ಪಾಟೀಲ(ಚಂಪಾ)ರನ್ನು ಅವರಿದ್ದ ಕೊಠಡಿಗೆ ಕರೆಸಿ ವಿಚಾರಿಸಿದರು. ತಮ್ಮ ಪ್ರತಿಭಟನೆ 'ಸಂಸ್ಕೃತ'ದ ಸ್ಥಾನಮಾನಗಳನ್ನು ನಿರ್ಧರಿಸಲು ನೇಮಕ ಆಗಿರುವ ಈ ಸಮಿತಿ ವಿರುದ್ಧವೇ ಎಂದು ಸ್ಪಷ್ಟಪಡಿಸಲಾಯಿತು. ಗೋಕಾಕ್ ಅವರು ಚಂಪಾ ಅವರಿಗೆ ತಮ್ಮ ನೇಮಕ ಕನ್ನಡದ ಸ್ಥಾನಮಾನಗಳನ್ನು ನಿರ್ಧರಿಸುವುದರ ಸಲುವಾಗಿ ಎಂದು ಸ್ಪಷ್ಟಪಡಿಸಿದರು. ಆದರೆ ಸ್ಥಳದಲ್ಲಿಯೇ ಇದ್ದ ಡಿ.ಡಿ.ಪಿ.ಐ ಅವರನ್ನು ಕರೆಸಿ ಸರ್ಕಾರಿ ಆದೇಶವನ್ನು ಓದಿಸಲಾಯಿತು. ಅದರಲ್ಲಿ (Circular ನಲ್ಲಿ) ಮೊದಲ ಆದ್ಯತೆ ಸಂಸ್ಕೃತಕ್ಕೂ, ಅನಂತರ ಕನ್ನಡ, ಇಂಗ್ಲೀಷ್ ಭಾಷೆಗಳಿಗೂ ನೀಡಿದ್ದುದು ಕಂಡುಬಂದಿತು. ಕೂಡಲೇ, ಸರ್ಕಾರಿ ಆಜ್ಞೆಯನ್ನು ಬಂದು ಓದಿದ ಡಿ.ಡಿ.ಪಿ.ಐ ಅಧಿಕಾರಿಯ ಮೇಲೆ ಗೋಕಾಕ್ ಸಿಟ್ಟಾದದ್ದು ಕನ್ನಡ ಪರವಾದಿಗಳಿಗೆ ಮತ್ತಷ್ಟು ಸಂಶಯ ಮೂಡಲು ಕಾರಣವಾಗದಿರಲಿಲ್ಲ.[೬] ಚಂಪಾ ಅವರು ಗೋಕಾಕ್ ಅವರೊಂದಿಗಿನ ಸಂವಾದ, ಪರಿಸ್ಥಿತಿಯನ್ನು ಹೊರಗಡೆ ಇದ್ದ ಪ್ರತಿಭಟನಕಾರರಿಗೆ ವಿವರಿಸಿದರು.

### ೬.೪.೧.೪ ಗೋಕಾಕ್ ಸಮಿತಿಗೆ ಘೇರಾವ್ ಮತ್ತು 'ಗೋಕಾಕ್, ಗೋ ಬ್ಯಾಕ್' ಘೋಷಣೆ

ಟ್ರೈನಿಂಗ್ ಕಾಲೇಜಿನ ಹೊರಗೆ ಕಾಯುತ್ತಿದ್ದ ಪ್ರತಿಭಟನಕಾರರು ಸಮಿತಿಗೆ ಮನವಿಗಳು ಸಂಗ್ರಹವಾಗದ ರೀತಿಯಲ್ಲಿ ಅಡ್ಡಿಪಡಿಸುತ್ತಿದ್ದರಷ್ಟೇಯಲ್ಲದೆ, ಸಂಸ್ಕೃತ ಪರವಾಗಿ ಈ ಪರಿಶೀಲನಾ ಸಮಿತಿ ಬಂದಿರುವುದೆಂದು ಶಂಕಿಸಿ ಧಿಕ್ಕಾರಗಳನ್ನು ಕೂಗಿದ್ದು ಉಂಟು. ಚಂದ್ರಶೇಖರ ಪಾಟೀಲ, ಎಂ. ಎಂ. ಕಲಬುರ್ಗಿ ಮೊದಲಾದವರು ಗೋಕಾಕರು ಸಭೆ ಸೇರಿದ್ದ ಕೊಠಡಿಗೆ ನುಗ್ಗಿ 'ಗೋಕಾಕ್, ಗೋ ಬ್ಯಾಕ್' ಎಂಬ ಘೋಷಣೆಗಳನ್ನು ಕೂಗಿ ಪ್ರತಿಕ್ರಿಯಿಸಿದರು. ಇವರೊಂದಿಗೆ ಬಸವರಾಜ ಕಟ್ಟೀಮನಿ, ಚನ್ನವೀರ ಕಣವಿ ಹಾಗೂ ಪ್ರತಿಭಟನಕಾರರು ಸೇರಿಕೊಂಡಿದ್ದರು. ತೀವ್ರ ಸ್ವರೂಪದ ಪ್ರತಿಭಟನೆಗಳು ಗೋಕಾಕ್ ಸಮಿತಿಯವರನ್ನು ಬೆಳಗಾಂ, ಬಿಜಾಪುರಗಳಲ್ಲೂ ಸುತ್ತುವರೆದವು. ಧಾರವಾಡದ ಸ್ನೇಹಿತರಿಂದ ಬಿಜಾಪುರದ ಚಳವಳಿಗಾರರಿಗೆ ಎಲ್ಲ ರೀತಿಯ ಮಾಹಿತಿಗಳು ಸಮಿತಿ ಅಲ್ಲಿಗೆ ಬರುವ ಮೊದಲೇ ತಲುಪಿದ್ದವು. ಇಂಥ ಅನೇಕ ಪ್ರತಿರೋಧಗಳ ನಡುವೆಯೂ ಈ ಭಾಷಾ ತಜ್ಞರ ಸಮಿತಿ ತನ್ನ ನಿಗದಿತ ಸಮಯಕ್ಕಿಂತ ಮುಂಚಿತವಾಗಿಯೆ ವರದಿಯನ್ನು ಸಿದ್ಧಪಡಿಸಿ

ಸರ್ಕಾರಕ್ಕೆ ಸಲ್ಲಿಸಿತು. ಈ 'ಭಾಷಾ ವರದಿ'ಯೆ 'ಗೋಕಾಕ್ ವರದಿ'. ಕನ್ನಡ ಪರವಾದಿಗಳು ಗುಮಾನಿ-ಶಂಕೆಗಳಿಂದ ಗಮನಿಸುತ್ತಿದ್ದ ಗೋಕಾಕ್ ವರದಿಯು ಕನ್ನಡಕ್ಕೆ ಮೊದಲ ಸ್ಥಾನವನ್ನು ಕೊಟ್ಟು ಸಂಸ್ಕೃತಕ್ಕೆ ಮೂರನೆಯ ಸ್ಥಾನವನ್ನು ನೀಡಿದ್ದು ಸಮಾಧಾನವನ್ನು ತಂದಿತು.[೧೦]

### ೬.೪.೧.೫ ಧಾರವಾಡದಲ್ಲಿ 'ಕನ್ನಡ ಕ್ರಿಯಾ ಸಮಿತಿ'ಯ ಹುಟ್ಟು

ಧಾರವಾಡದಲ್ಲಿ ಹುಟ್ಟಿಕೊಂಡ 'ಕನ್ನಡ ಕ್ರಿಯಾ ಸಮಿತಿ'ಗೆ ತನ್ನದೇ ಆದ ಚರಿತ್ರೆ ಇದೆ. ಗೋಕಾಕ್ ಸಮಿತಿಯನ್ನು ವಿರೋಧಿಸಲು ಯಾವುದೇ ರೀತಿಯ ಶಾಶ್ವತ ಸಂಘಟನೆ ಧಾರವಾಡದಲ್ಲಿ ಇರಲಿಲ್ಲ. ಹೀಗಾಗಿ ಹುಬ್ಬಳ್ಳಿಯ ಸಂಘಟನೆಗಳು ಹಾಗೂ ಧಾರವಾಡದ ಚಂಪಾ ಅವರ 'ಸಂಕ್ರಮಣ'ದ ಗೆಳೆಯರು, ಹಿರಿಯರು ವಿದ್ಯಾವರ್ಧಕ ಸಂಘದ ಆವರಣದಲ್ಲಿ ಸಭೆ ಸೇರಿ ಈ ಕುರಿತು ವಿಚಾರ ಮಾಡಿದರು. ಶಾಶ್ವತ ಸಂಘಟನೆಯು ಇಲ್ಲದಿದ್ದಲ್ಲಿ ಚಳವಳಿಗೆ ಕಾವು ಬರುವುದಿಲ್ಲವೆಂಬುದು ಎಂ. ಎಂ. ಕಲಬುರ್ಗಿ ಅವರ ವಾದವಾಗಿತ್ತು. ಅದರಂತೆ ಎಲ್ಲ ಹಿರಿಯರನ್ನು, ಸಂಘಟನೆಗಳನ್ನು 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಒಳಗೆ ಸಭೆ ಕರೆಯಲಾಯಿತು. ಈ ಸಭೆಯಲ್ಲಿ ಗೋಕಾಕ್ ಚಳವಳಿಗೆ ಆರಂಭಿಕ ಚಾಲನೆ ನೀಡಿದ ಎಂ. ಎಂ. ಕಲಬುರ್ಗಿ, ಚಂದ್ರಶೇಖರ ಪಾಟೀಲರನ್ನೇ 'ಕನ್ನಡ ಕ್ರಿಯಾ ಸಮಿತಿ'ಯ ಸ್ಥಾಪನೆಗೂ ಕಾರಣಕರ್ತರೆಂದು ಗುರುತಿಸಲಾಯಿತು. ಈ ಹಿನ್ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದ ಸಮಿತಿಗೆ ಇವರಿಬ್ಬರನ್ನು ಕಾರ್ಯದರ್ಶಿಗಳನ್ನಾಗಿಯೂ, ಗುಂಜೆಟ್ಟಿ ಅವರನ್ನು ಕೋಶಾಧಿಕಾರಿಯನ್ನಾಗಿಯೂ ಆಯ್ಕೆ ಮಾಡಲಾಯಿತು. ಈ ಶಾಶ್ವತ ಸಂಘಟನೆಗೆ ಹಿರಿಯರೊಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡುವುದು ಸಮಂಜಸವೆಂದು ಪರಿಗಣಿಸಿ, ಹಿರಿಯ ಸಂಶೋಧಕರಾಗಿದ್ದ ಶಂ. ಬಾ.ಜೋಶಿ ಯವರನ್ನೇ ಆ ಸ್ಥಾನಕ್ಕೆ ಆಯ್ಕೆ ಮಾಡಿದ್ದುಂಟು. ಪಾಟೀಲ ಪುಟ್ಟಪ್ಪನವರು ಧಾರವಾಡದ 'ವಿದ್ಯಾವರ್ಧಕ ಸಂಘ'ಕ್ಕೆ ಅಂದಿನ ಅಧ್ಯಕ್ಷರು. ಗೋಕಾಕ್ ಚಳವಳಿಗೆ ವಿದ್ಯಾವರ್ಧಕ ಸಂಘದ ಆವರಣವನ್ನು ನೀಡಲು ಸಂಘ ನಿರ್ಣಯ ಸ್ವೀಕರಿಸುವ ಮೂಲಕ ತನ್ನ ಒಪ್ಪಿಗೆ ನೀಡಿತು. ಆದರೆ ಈ ಚಳವಳಿ ಯಶಸ್ಸನ್ನು ಪಡೆಯುವಲ್ಲಿ ಸಂಘದ ಒಳಗೆ ಹಾಗೂ ಹೊರಗೆ ಅನೇಕ ವಿರೋಧಗಳು ಕಂಡುಬಾರದಿರಲಿಲ್ಲ. ಕನ್ನಡದ ಕೆಲಸಕ್ಕಾಗಿ ಚಂಪಾ, ಕಲಬುರ್ಗಿ ಅವರುಗಳು ಅನೇಕ ಅವಮಾನಗಳನ್ನು ಸಹಿಸಿಕೊಂಡದ್ದುಂಟು. ಈ ವೇದಿಕೆ ಸಿದ್ಧವಾಗುತ್ತಲೇ ಬಸವರಾಜ ಕಟ್ಟಿಮನಿ, ರಾ.ಯ. ಧಾರವಾಡಕರ, ಚನ್ನವೀರ ಕಣವಿ, ಆರ್. ಸಿ. ಹಿರೇಮಠ, ಮಾಳವಾಡ, ಪಾಟೀಲ ಪುಟ್ಟಪ್ಪ, ರಾಮಜಾಧವ ಮೊದಲಾದವರ ಪ್ರೋತ್ಸಾಹಗಳು ದೊರೆತವು.

### ೬.೪.೧.೬ ಸರ್ಕಾರದ ವಿರುದ್ಧ ಮುಸ್ಲಿಮರ ಪ್ರತಿಭಟನೆ

ಗೋಕಾಕ್ ವರದಿ ಪ್ರಕಟವಾದ ಮೇಲೆ ಮುಖ್ಯಮಂತ್ರಿ ಗುಂಡೂರಾಯರು ಅದನ್ನು ಅನುಷ್ಠಾನಗೊಳಿಸುವುದರ ಬಗ್ಗೆ ಚಕಾರವೆತ್ತಲಿಲ್ಲ. ಇದಕ್ಕೆ ಕಾರಣ ರಾಯರ ಆಪ್ತರೂ, ಸಂಸತ್ ಸದಸ್ಯರೂ ಆಗಿದ್ದ ಎಫ್. ಎಂ. ಖಾನ್ ಅವರು ವ್ಯಕ್ತಪಡಿಸಿದ ತಕರಾರು ಹಾಗೂ ಪ್ರತಿಭಟನೆಗಳು. ವರದಿಯು ಮುಸ್ಲಿಮ್ ಅಲ್ಪಸಂಖ್ಯಾತರ ಹಿತಕ್ಕೆ ಧಕ್ಕೆ ತರುತ್ತದೆಯೆಂಬುದು ಇವರ ವಾದವಾಗಿತ್ತು. ಈ ವರದಿಯನ್ನು ವಿರೋಧಿಸಿ ವಿಧಾನಸೌಧದ ಎದುರು ಪ್ರತಿಭಟನೆ, ಪ್ರದರ್ಶನಗಳು, ಎಫ್. ಎಂ. ಖಾನರ ನೇತೃತ್ವದಲ್ಲಿ ನಡೆದವು. ಓಟುಗಳ ದೃಷ್ಟಿಯಿಂದ ಮುಸ್ಲಿಮರನ್ನು ಕಾಂಗ್ರೆಸ್ ಸರ್ಕಾರ ಎದುರು ಹಾಕಿಕೊಳ್ಳಲು

ಮುಂದಾಗಲಿಲ್ಲ. ಹೀಗಾಗಿ ವರದಿಯನ್ನು ಜಾರಿಗೆ ತರುವಲ್ಲಿ ವಿಳಂಬ ನೀತಿಯನ್ನು ಅನುಸರಿಸಿತು. ಇದರಿಂದ ಕನ್ನಡ ಪರವಾದಿಗಳು, ಸಾಹಿತಿ-ಕಲಾವಿದರೂ, ಮಾಧ್ಯಮಗಳ ಮೂಲಕವೂ ಒತ್ತಾಯಿಸಿ ಸರ್ಕಾರದ ಮೇಲೆ ಒತ್ತಡಗಳನ್ನು ಹೇರಿದರು. ಆದರೆ ಇದಾವುದಕ್ಕೂ ಸರ್ಕಾರ ಮಣಿಯಲಿಲ್ಲ. ಕೊನೆಗೆ ರಾಜ್ಯವ್ಯಾದ್ಯಂತ ವರದಿ ಜಾರಿಗಾಗಿ ಚಳವಳಿಗಳು, ಪ್ರತಿಭಟನೆಗಳು ಆರಂಭಗೊಂಡವು. ಈ ಚಳವಳಿಯನ್ನೆ 'ಗೋಕಾಕ್ ಚಳವಳಿ' ಎಂದು ಕರೆದದ್ದು.

### ೬.೪.೧.೭ ರಹಮಾನ್ ಖಾನರಿಂದ ಉಪವಾಸ ಸತ್ಯಾಗ್ರಹ

೧೯೮೧ರ ಸಾಲಿನ ಶಿಕ್ಷಣ ಕ್ರಮದಲ್ಲಿ ಗೋಕಾಕ್ ವರದಿಯಲ್ಲಿನ ಒಂದು ಭಾಗವನ್ನು ಅಳವಡಿಸಲು ಸಮಿತಿಯೇ ಸೂಚಿಸಿತ್ತು. ಸರ್ಕಾರದ ವಿಳಂಬ ನೀತಿಯ ಬಗ್ಗೆ ಎಷ್ಟೇ ಟೀಕೆಗಳಾದರೂ ೧೯೮೨ರ ಶೈಕ್ಷಣಿಕ ವರ್ಷಕ್ಕೂ ಈ ಬಗ್ಗೆ ಯಾವುದೇ ಸರ್ಕಾರಿ ಆದೇಶ ಹೊರಬೀಳಲಿಲ್ಲ. ಬೇಸತ್ತ ಕನ್ನಡ ಕಾರ್ಯಕರ್ತರು ಸರ್ಕಾರದೊಂದಿಗೆ ನೇರವಾದ ಹೋರಾಟಕ್ಕೆ ಸಿದ್ಧರಾದರು. ಇದರ ಪರಿಣಾಮವೆ ೧೯೮೨ರ ಮಾರ್ಚ್ ೧೩ರಂದು ಆರಂಭವಾದ ಆಮರಣ ಉಪವಾಸ ಪ್ರತಿಭಟನೆ. ಈ ನಿರಶನವನ್ನು 'ಕನ್ನಡ ಪಕ್ಷ'ವು ವಿಧಾನ ಸೌಧದ ಎದುರು ತಮ್ಮ ಕಾರ್ಯಕರ್ತರೊಂದಿಗೆ ಆಯೋಜಿಸಿತ್ತು. ಮೊದಲ ದಿನವೆ ಕನ್ನಡ ಚಳವಳಿಗಾರ ರಹಮಾನ್ ಖಾನ್ ಅವರು ಆಮರಣಾಂತ ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದರು. ಈ ನಿರಶನದಲ್ಲಿ ಗೋವಿಂದಳ್ಳಿ ದೇವೇಗೌಡ, ಜಿ. ಎಸ್. ರೇಣುಕಪ್ಪ, ಸುಧಾಮ, ಮಾಜಿ ಶಾಸಕ ಕೆ. ಪ್ರಭಾಕರ ರೆಡ್ಡಿ 'ಪಕ್ಷ'ದ ಅಧ್ಯಕ್ಷರಾದ ಶಿವಪ್ರಸಾದ್, ಸತ್ಯನಾರಾಯಣ ಮಾನೆ ಮೊದಲಾದವರಿದ್ದರು. ಮೂರನೆಯ ದಿನ (ಮಾರ್ಚ್ ೧೮ ರಂದು) ರಹಮಾನ್ ಖಾನ್‌ರ ಸ್ಥಿತಿ ಚಿಂತಾಜನಕ ಆಯಿತು. ಈ ಕುರಿತು ವಿಧಾನಸಭೆಯಲ್ಲಿ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡವರು ಜೆ. ಎಚ್. ಪಟೇಲ್.[೧೧] ಪಟೇಲರು ಅಂದು ಅರಸ್ ಅವರ ಸಮಾಜವಾದಿ ಕಾಂಗ್ರೆಸ್ಸಿನ ಶಾಸಕರಾಗಿದ್ದರು. ಗೋಕಾಕ್ ವರದಿ, ನಿರಶನಗಳ ಬಗ್ಗೆ ಗಮನಹರಿಸಲು 'ಜನತಾ ಪಕ್ಷ'ದ ಅಧ್ಯಕ್ಷರಾಗಿದ್ದ ಎಸ್. ಆರ್. ಬೊಮ್ಮಾಯಿ ಅವರು ಸಹ ಸೂಚನೆ ಕಳುಹಿಸಿ ಒತ್ತಾಯಿಸಿದ್ದುಂಟು. ಗೋಕಾಕ್ ವರದಿ ಪರಿಶೀಲನೆಗೆ ಇನ್ನೊಂದು ಸಮಿತಿಯನ್ನು ನೇಮಿಸಿರುವುದಾಗಿ ಮುಖ್ಯಮಂತ್ರಿ ಗುಂಡೂರಾಯರು ಹೇಳಿ ಅದರ ವರದಿಯಾಧಾರದ ಮೇಲೆ ಅನುಷ್ಠಾನಗೊಳಿಸಲಾಗುವುದು ಎಂದು ಭರವಸೆಯಿತ್ತರು. ಪರಿಶೀಲನಾ ಸಮಿತಿಯ ನಿಧಾನಗತಿಗೆ ಪಿ. ರಾಮದೇವ ಅವರು ಆಕ್ಷೇಪಿಸದೆ ಇರಲಿಲ್ಲ. ಸರ್ಕಾರದ ಭರವಸೆ ಮೇರೆಗೆ ನಿರಶನವನ್ನು ಅಂತ್ಯಗೊಳಿಸಲು ರಹಮಾನ್ ಖಾನರನ್ನು ಕೇಳಿಕೊಳ್ಳಲಾಯಿತು. ದೇವರಾಜ ಅರಸು, ಸಿದ್ಧಯ್ಯಪುರಾಣಿಕರ ಒತ್ತಾಯಗಳಿಗೆ ಮಣಿದ ಖಾನ್ ಉಪವಾಸವನ್ನು ಮೊಟಕುಗೊಳಿಸಿದರು.

### ೬.೪.೧.೮ ಮೈಸೂರಿನಲ್ಲಿ ಪ್ರತಿಭಟನೆ

ಮೈಸೂರಿನಲ್ಲಿಯು ವರದಿಯನ್ನು ಜಾರಿಗೆ ತರಲು ಒತ್ತಾಯಿಸಿ ನ್ಯೂ ಸಯ್ಯಾಜಿರಾವ್ ರಸ್ತೆಯ ತಾತಯ್ಯ ಪಾರ್ಕಿನಲ್ಲಿ ಕನ್ನಡಪರ ಸಂಘಟನೆಗಳು ಧರಣಿಯನ್ನು ಆರಂಭಿಸಿದ್ದವು. ಧರಣಿ ಸತ್ಯಾಗ್ರಹದ ಐದನೆಯ ದಿನ (೨೦-೩-೧೯೮೨) ಯು. ಆರ್. ಅನಂತಮೂರ್ತಿ,

ಎಚ್ಚೆಸ್ಕೆ, ಪ್ರೊ. ಎನ್. ಬೋರಲಿಂಗಯ್ಯ ಮೊದಲಾದವರು ಧರಣಿ ಕುಳಿತರು. ಈ ಪ್ರತಿಭಟನೆಯಲ್ಲಿ ಮೈಸೂರು ವಿದ್ಯಾರ್ಥಿ ಕ್ರಿಯಾ ಸಮಿತಿ (ಎಂ. ರಾಮೇಗೌಡರ ಅಧ್ಯಕ್ಷತೆ), ನಂಜನಗೂಡಿನ ಜಯಕರ್ನಾಟಕ ಸಂಘ, ಅಣ್ಣಾ ಡಿ.ಎಂ.ಕೆ ಪಕ್ಷ (ಪ್ರೊ. ಎ. ಡಿ. ಫ್ರಾನ್ಸಿಸ್), ಕರ್ನಾಟಕ ಯುವಜನ ಹೋರಾಟ ಸಮಿತಿ, ಬಸವೇಶ್ವರ ಯುವಕ ಸಂಘ, ಜೈ ಜ್ಯೋತಿ ಕನ್ನಡ ಸಂಘ, ದಲಿತ ವಿದ್ಯಾರ್ಥಿ ಒಕ್ಕೂಟ ಮೊದಲಾದ ಸಂಘ-ಸಂಸ್ಥೆಗಳು ಭಾಗವಹಿಸಿದ್ದವು.

### ೬.೪.೧.೯ ಬೆಂಗಳೂರಿನಲ್ಲಿ ಬೃಹತ್ ರ್‍ಯಾಲಿ

ಬಿಜಾಪುರದಲ್ಲಿ ಮಾರ್ಚ್ ೧೭ರಿಂದಲೇ ಉಪವಾಸವನ್ನು ಆರಂಭಿಸಿದ್ದ ಗಂಗಾಧರ ಕೊರಳ್ಳಿ ಅವರು ಹಿಂದಕ್ಕೆ ಸರಿಯಲಿಲ್ಲ. ಸರ್ಕಾರವು ಕ್ರಿಯಾಶೀಲ ಆಗದಿರುವುದನ್ನು ಕಂಡು ಮಾರ್ಚ್ ೩೧ರಂದು 'ಕನ್ನಡ ಸಂರಕ್ಷಣಾ ಸಮಿತಿ'ಯು ಬೆಂಗಳೂರಿನಲ್ಲಿ ಒಂದು ಬೃಹತ್ ರ್‍ಯಾಲಿಯನ್ನು ಆಯೋಜಿಸಿತು. ಮೈಸೂರು ಬ್ಯಾಂಕ್ ಚೌಕದಿಂದ ವಿಧಾನ ಸೌಧಕ್ಕೆ ಬಂದ ಮೆರವಣಿಗೆಯಲ್ಲಿ ಕನ್ನಡದ ವಿರುದ್ಧ ಮುಸ್ಲಿಮರನ್ನು ಎತ್ತಿಕಟ್ಟಿದ್ದ ಎಫ್.ಎಂ. ಖಾನರ ವಿರುದ್ಧ ಘೋಷಣೆಗಳು ಕೇಳಿಬಂದವು. ಚಳವಳಿಗಾರ ರಹಮಾನ್ ಖಾನ್ ಕನ್ನಡ ಪರವಾದ ಸಂಘಟನೆಗಳೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರಿಂದ ಚಳವಳಿಯನ್ನು ಚಾಲ್ತಿಯಲ್ಲಿಡಲು ಅನುಕೂಲ ಆಯಿತು. ರಹಮಾನ್ ಖಾನರಂತು ಎಫ್. ಎಂ. ಖಾನರಿಗೆ 'ಕನ್ನಡ ದ್ರೋಹಿ' ಎಂದು ಹೆಸರಿಟ್ಟರು. ವಿಧಾನಸೌಧದ ಬಳಿ 'ಕನ್ನಡ ದ್ರೋಹಿ ಎಫ್. ಎಂ. ಖಾನರನ್ನು ಗುಂಡಿಕ್ಕಿ ಕೊಲ್ಲಿ' ಎಂದು ಭಾವಾವೇಶದಿಂದ ಕೂಗಿದ್ದು ಉಂಟು. ನಾಡಿನ ಎಲ್ಲೆಡೆ ಕನ್ನಡಪರವಾದ ಸಂಘ-ಸಂಸ್ಥೆಗಳು ಕ್ರಮೇಣ ಚಳವಳಿಯನ್ನು ತೀವ್ರಗೊಳಿಸತೊಡಗಿದ್ದವು. ಸಾಹಿತಿ-ಕಲಾವಿದರು, ವಕೀಲರು, ವಿದ್ವಾಂಸರು ಗೋಕಾಕ್ ವರದಿಯ ಜಾರಿಯ ಬಗ್ಗೆ ವಿಚಾರ ಸಂಕಿರಣ ಇತ್ಯಾದಿಗಳ ಮೂಲಕ ಜನರಲ್ಲಿ ಜಾಗೃತಿ ಉಂಟುಮಾಡತೊಡಗಿದರು.

### ೬.೪.೧.೧೦ ಧಾರವಾಡದ ಕನ್ನಡ ಕ್ರಿಯಾ ಸಮಿತಿ ನಿರಶನ

ಧಾರವಾಡದ ಕನ್ನಡ ಕ್ರಿಯಾ ಸಮಿತಿಯು ಅಲ್ಲಿನ ಎಲ್ಲ ಶಿಕ್ಷಕರು, ಕಲಾವಿದರು, ಸಾಹಿತಿಗಳು, ವಿದ್ಯಾರ್ಥಿಗಳನ್ನು ಹುರುದುಂಬಿಸಿ ಚಳವಳಿಯನ್ನು ತೀವ್ರಗೊಳಿಸಿತ್ತು. ೨-೪-೧೯೮೨ ರಿಂದ ಧಾರವಾಡದಲ್ಲಿ ನಿರಶನ ರೂಪದ ಚಳವಳಿಗಳು ಆರಂಭವಾದವು. ಚಂದ್ರಶೇಖರ ಪಾಟೀಲ ಮತ್ತು ಎಂ. ಎಂ. ಕಲಬುರ್ಗಿ ಅವರು ಶಂ. ಬಾ. ಜೋಶಿ ಅವರನ್ನು ಉಪವಾಸ ಸತ್ಯಾಗ್ರಹವನ್ನು ಮಾಡಲು ಕರೆತಂದರು. ಅನಾರೋಗ್ಯದ ನಿಮಿತ್ತ ಎರಡು ತಾಸುಗಳು ಉಪವಾಸ ಕೂರುವುದರೊಂದಿಗೆ ಈ ನಿರಶನವನ್ನು ಚಾಲೂ ಮಾಡಿದ್ದು ಗಮನಾರ್ಹ. ಉಳಿದಂತೆ ಪಾಟೀಲ ಪುಟ್ಟಪ್ಪ, ರಾ.ಯ.ಧಾರವಾಡಕರ, ಆರ್.ಸಿ.ಹಿರೇಮಠ, ಚನ್ನವೀರ ಕಣವಿ, ರಾಮ ಜಾಧವ ಹಾಗೂ ಅನೇಕರು ಇದರಲ್ಲಿ ಪಾಲ್ಗೊಂಡರು. ಒಂದೆರಡು ದಿನಗಳಲ್ಲಿ ನಾಡಿನಾದ್ಯಂತ ಈ ಚಳವಳಿ ಹಬ್ಬಿತು. ಮೈಸೂರಿನ ಕನ್ನಡ ಕ್ರಿಯಾ ಸಮಿತಿಯು ಕುವೆಂಪು ಅವರ ಪ್ರೇರಣೆಯಲ್ಲಿ ಚುರುಕುಗೊಂಡಿತು. (ಏಪ್ರಿಲ್ ೬ ರಿಂದ).

### ೬.೪.೧.೧೧ ಜಾಗೃತಿ ಸಮಾವೇಶ ಮತ್ತು 'ಸಾಹಿತಿಗಳ ಕಲಾವಿದರ ಬಳಗ'ದ ಹುಟ್ಟು

ಬೆಂಗಳೂರಿನಲ್ಲಿಯೂ ೬-೪-೧೯೮೨ರಂದು 'ಕನ್ನಡ ಜಾಗೃತಿ ಸಮಾವೇಶ' ವೊಂದು

ಸೇರಿತು. ಜಿ. ನಾರಾಯಣರು ಕರೆದಿದ್ದ ಈ ಸಮಾವೇಶದಲ್ಲಿ ಎಂ. ಚಿದಾನಂದ ಮೂರ್ತಿ, ಕ. ನಂ. ನಾಗರಾಜು, ಪಿ. ವಿ. ನಾರಾಯಣ ಮೊದಲಾದ ಹಿರಿಯ ಸಾಹಿತಿಗಳು-ಕಲಾವಿದರು ಭಾಗವಹಿಸಿದ್ದರು. ಇದರಲ್ಲಿ, ೧೩-೪-೧೯೮೨ರಿಂದ ನಡೆಸುವ ಮೌನ ಮೆರವಣಿಗೆ, ಪ್ರದರ್ಶನ, ಧರಣಿ ಇತ್ಯಾದಿ ಚಳವಳಿ ರೂಪುರೇಷೆಗಳನ್ನು ಕುರಿತಂತೆ ಸ್ಪಷ್ಟಪಡಿಸಲಾಯಿತು.

ಸಾಹಿತಿ-ಕಲಾವಿದರೆ ಹೆಚ್ಚು ಪಾಲ್ಗೊಂಡಿದ್ದ ೧೩-೪-೧೯೮೨ರ ಸಭೆಗೆ ಕನ್ನಡ ಚಳವಳಿಗಾರ ಜಿ. ನಾರಾಯಣ ಕುಮಾರ್ ಅವರು ಸೇರಿಕೊಂಡಿದ್ದು ವಿಶೇಷ. ಏಕೆಂದರೆ ಅಂದು ಬಹುಪಾಲು ಕನ್ನಡ ಚಳವಳಿ ನಾಯಕರೆನ್ನಿಕೊಂಡಿದ್ದವರು ಗೋಕಾಕ್ ಚಳವಳಿಗೆ ತಮ್ಮನ್ನು ತೊಡಗಿಸಿಕೊಂಡಿರಲಿಲ್ಲ. ಅದರಲ್ಲಿ ವಾಟಾಳ್ ನಾಗರಾಜ ಅವರು ಸಹ ಒಬ್ಬರು. ಸೆಂಟ್ರಲ್ ಕಾಲೇಜಿನ ಆವರಣದಿಂದ ಆರಂಭಗೊಂಡ ಮೌನ ಮೆರವಣಿಗೆ ವಿಧಾನಸೌಧವನ್ನು ತಲುಪುವುದೆಂದು ನಿರ್ಧರಿಸಲಾಯಿತು. ಈ ಮೆರವಣಿಗೆ ಮೌನವಾಗಿರುತ್ತದೆ ಎಂದು ಹೇಳಿದ್ದರೂ ಕೆ. ಆರ್. ಸರ್ಕಲ್ ಬಳಿ ಪೋಲೀಸರು ತಡೆದದ್ದರಿಂದ ಘೋಷಣೆ, ಧಿಕ್ಕಾರಗಳನ್ನು ಕೂಗುವಂತೆ ಆಯಿತು. ಕನ್ನಡ-ಕರ್ನಾಟಕದ ಜಯಕಾರಗಳೊಂದಿಗೆ ಸರ್ಕಾರ, ಗುಂಡೂರಾವ್, ಎಫ್. ಎಂ. ಖಾನ್‌ರ ವಿರುದ್ಧ ದಿಕ್ಕಾರದ ಕೂಗುಗಳೂ ಕೇಳಿಬಂದವು. ಈ ಮೆರವಣಿಗೆ ವಿಧಾನಸೌಧ ತಲುಪಿ ಅಲ್ಲಿ ಸರದಿ ಉಪವಾಸವನ್ನು ಕೈಗೊಂಡಿತು. ಇದರಲ್ಲಿ (ನಿರಸನದಲ್ಲಿ) ಪಿ. ಲಂಕೇಶ್, ಜಿ. ಎಸ್. ಶಿವರುದ್ರಪ್ಪ, ಸಿದ್ದಯ್ಯ ಪುರಾಣಿಕ್, ರಂ. ಶ್ರೀ. ಮುಗಳಿ, ಕೋ. ಚೆನ್ನಬಸಪ್ಪ, ಎಸ್. ಆರ್. ಮಳಗಿ, ಎಂ. ಚಿದಾನಂದಮೂರ್ತಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್. ನಿಸಾರ್ ಅಹ್ಮದ್, ಮಾವಿನಕೆರೆ ರಂಗನಾಥನ್, ಲಕ್ಷ್ಮೀನಾರಾಯಣ ಭಟ್ಟ, ಬರಗೂರು ರಾಮಚಂದ್ರಪ್ಪ, ಪಿ. ವಿ. ನಾರಾಯಣ, ಕೆ. ವಿ. ನಾರಾಯಣ, ಟಿ. ಶ್ರೀನಿವಾಸರಾಜು, ಜಿ. ಪುಟ್ಟಸ್ವಾಮಯ್ಯ, ಎಂ. ವಿ. ಸೀತಾರಾಮಯ್ಯ, ಎಚ್. ದೇವೀರಪ್ಪ, ಎಚ್. ಎಸ್. ಪಾರ್ವತಿ, ಜಿ. ವೈ. ಹೆಬ್ಬೀಕರ್, ಜಿ. ಪಿ. ಶಿವಸ್ವಾಮಿ ಮೊದಲಾದವರು ಪಾಲ್ಗೊಂಡಿದ್ದರು. ಇವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದವರು ಸಾಹಿತಿ-ಕಲಾವಿದರೆ. ಚಳವಳಿಗಾರ ರಹಮಾನ್ ಖಾನ್ ಮತ್ತು ಗೆಳೆಯರು ಈ ಚಳವಳಿಯನ್ನು ಅವರ ಹೆಸರಿನಿಂದಲೆ ಕರೆಯಲು ಸೂಚಿಸಿದರು. ಹೀಗಾಗಿ ಈ ಸನ್ನಿವೇಶದಲ್ಲಿ 'ಸಾಹಿತಿಗಳ ಕಲಾವಿದರ ಬಳಗ' ಹುಟ್ಟಿಕೊಂಡಿತು. ಈ ಮಧ್ಯೆ ಮೈಸೂರಿನಲ್ಲಿ ಮುಖ್ಯಮಂತ್ರಿ ಗುಂಡೂರಾಯರನ್ನು ಮುತ್ತಿಗೆ ಹಾಕಿದ್ದು ವಿಶೇಷ ಸುದ್ದಿಯಾಗದಿರಲಿಲ್ಲ. ಈ ಸಂಬಂಧ ಅನೇಕ ಕಾರ್ಯಕರ್ತರನ್ನು ಬಂಧಿಸಲಾಯಿತು. ಬಂಧಿತರ ಬಿಡುಗಡೆಗಾಗಿ ರಂಜಾನ್ ದರ್ಗಾ ಮೊದಲಾದವರು 'ಕನ್ನಡ ಪಕ್ಷ'ದ ಆಶ್ರಯದಲ್ಲಿ ಮೆರವಣಿಗೆ ನಡೆಸಿದರು. ಈ ಮೆರವಣಿಗೆಯ ಉದ್ಘಾಟನೆ ನಡೆದದ್ದು ಹಿರಿಯ ಸಾಹಿತಿ ತ. ರಾ. ಸುಬ್ಬರಾವ್ ಅವರಿಂದ.

### ೬.೪.೧.೧೨ ಅಖಿಲ ಕರ್ನಾಟಕ ಕೇಂದ್ರ ಕನ್ನಡ ಕ್ರಿಯಾಸಮಿತಿ

ಬೆಂಗಳೂರಿನಲ್ಲಿನ 'ಸಾಹಿತಿ-ಕಲಾವಿದರ ಬಳಗ'ವು ತೀವ್ರ ಸ್ವರೂಪದ ಪ್ರತಿಭಟನೆಗಳಿಗೆ ಸ್ಪಂದಿಸುವಂತಾಯಿತು. ನಾಡಿನಾದ್ಯಂತ ಅನೇಕ ಕನ್ನಡ ಕ್ರಿಯಾ ಸಮಿತಿಗಳು

ಹುಟ್ಟಿಕೊಂಡವು. ಆಯಾ ಸ್ಥಳಗಳಲ್ಲಿ ಗೋಕಾಕ್ ವರದಿಯು ಜಾರಿಗೆ ಬರಲು ಒತ್ತಾಯಿಸಿ ವಿಭಿನ್ನವಾದ ಪ್ರತಿಭಟನೆಗಳನ್ನು ವ್ಯಕ್ತಪಡಿಸುತ್ತಿದ್ದುದು ಸರ್ಕಾರದ ಗಮನಕ್ಕೆ ಬಂದಿತಾದರೂ ಸಮಸ್ಯೆಯನ್ನು ಬಗೆಹರಿಸಲಿಲ್ಲ. ಮೈಸೂರಿಗೆ ಧಾರವಾಡದ ಕ್ರಿಯಾ ಸಮಿತಿ ಸದಸ್ಯರೆಲ್ಲ ಆಗಮಿಸಿದರು. ಅಲ್ಲಿ ಪೂರ್ಣಚಂದ್ರ ತೇಜಸ್ವಿ, ಪಿ. ಮಲ್ಲೇಶ್ ಮೊದಲಾದವರೆಲ್ಲ ಇದ್ದಂಥ ಸಭೆಯೊಂದು ನಡೆಯಿತು. ಅಧ್ಯಕ್ಷತೆ ಶಂಕರೇಗೌಡರದು. ಇದರಲ್ಲಿ ನಾಡಿನ 'ಕನ್ನಡ ಕ್ರಿಯಾ ಸಮಿತಿ'ಗಳೆಲ್ಲವನ್ನೂ ಒಂದುಗೂಡಿಸಿದ್ದು ವಿಶೇಷವಾಗಿತ್ತು. ಅದರ ಪರಿಣಾಮವೇ ಧಾರವಾಡದ 'ಅಖಿಲ ಕರ್ನಾಟಕ ಕೇಂದ್ರ ಕನ್ನಡ ಕ್ರಿಯಾ ಸಮಿತಿ'ಯ ಹುಟ್ಟು. ಶಂ. ಬಾ. ಜೋಶಿ ಅವರು ಅನಾರೋಗ್ಯದ ಮಧ್ಯೆ ಇದರ ಅಧ್ಯಕ್ಷತೆ ವಹಿಸಿಕೊಂಡಿದ್ದರು. ಈ ಕೇಂದ್ರ ಸಮಿತಿಯನ್ನು ಮುನ್ನಡೆಸುವಲ್ಲಿ ಪಾಟೀಲ ಪುಟ್ಟಪ್ಪ, ಚಂದ್ರಶೇಖರ ಪಾಟೀಲ ಹಾಗೂ ಎಂ. ಎಂ. ಕಲಬುರ್ಗಿ ಅವರುಗಳ ಪಾತ್ರ ಹಿರಿದು. ಈ ಮೂವರಿಂದಲೇ ಧಾರವಾಡದಲ್ಲಿ ಗೋಕಾಕ್ ಚಳವಳಿ 'ಕನ್ನಡ ಚಳವಳಿ'ಯಾಗಿ ಪರಿವರ್ತನೆಗೊಂಡದ್ದು. ಹಾಗೂ ಅದು ಹುಟ್ಟಿಕೊಳ್ಳಲು ಸಹ ಈ ಮೂವರ ಪ್ರಯತ್ನಗಳೇ ಕಾರಣ. ನಂತರ ಎಲ್ಲ ಹಿರಿಯರೂ ಇದರೊಂದಿಗೆ ಸೇರಿಕೊಡರು. ಅವರಲ್ಲಿ ಚನ್ನವೀರ ಕಣವಿ, ಬಸವರಾಜ ಕಟ್ಟಿಮನಿ ಮೊದಲಾದವರ ಪ್ರವೇಶವಾಗುತ್ತಾ ಹೋಯಿತು.

### ೬.೪.೧.೧೩ ಮೇರು ನಟ ರಾಜಕುಮಾರ್ ಅವರ ಚಳವಳಿ ಪ್ರವೇಶ

ಕನ್ನಡದ ಮೇರು ನಟ ಡಾ. ರಾಜಕುಮಾರ್ ಅವರು ಸಾಹಿತಿ ಕಲಾವಿದರಿಗೆ ಹುಮ್ಮಸ್ಸು ನೀಡಲು ಬೆಂಗಳೂರಿನಲ್ಲಿ ಚಳವಳಿಗೆ ಸೇರಿಕೊಂಡದ್ದು ನಾಡಿನಾದ್ಯಂತ ಬಿರುಸಿನ ಸುದ್ದಿ ಆಯಿತು. ಏಪ್ರಿಲ್ ೧೭ರಂದು ಅವರು ಕನ್ನಡಕ್ಕಾಗಿ ತಾವು ಎಂಥ ತ್ಯಾಗ ಮಾಡುವುದಕ್ಕೂ ಸಿದ್ಧವಿರುವುದಾಗಿ ಘೋಷಿಸಿದ್ದು ಕನ್ನಡಿಗರನ್ನು ಪ್ರೇರಪಿಸಿತ್ತು. ಇದರಿಂದ ಸರ್ಕಾರವು ಚಳವಳಿ ತೀವ್ರವಾಗುವುದನ್ನು ತಡೆಯುವುದರ ಕಡೆಗೆ ಗಮನ ಹರಿಸದೆ ಇರಲಿಲ್ಲ. ರಾಜಕುಮಾರರ ಚಳವಳಿ ಪ್ರವೇಶ, ಪೋಲೀಸರ ವರ್ತನೆಗಳಿಂದ ಜನರು ಹಿಂಸಾಚಾರಕ್ಕೂ ಇಳಿದದ್ದುಂಟು. ಚಿತ್ರದುರ್ಗದಲ್ಲಿ ಪರ ಹಾಗೂ ವಿರುದ್ಧ ನಡೆದ ಗಲಭೆಗಳಲ್ಲಿ ಇಬ್ಬರು ಪೋಲೀಸರ ಗುಂಡಿಗೆ ಬಲಿಯಾದರು. ಇದನ್ನು ನ್ಯಾಯಾಂಗ ತನಿಖೆ ಮಾಡಿಸಲು ಎಸ್. ನಿಜಲಿಂಗಪ್ಪ ಒತ್ತಾಯಿಸಿದರು. ಧಾರವಾಡದಲ್ಲಿ ಕೇಂದ್ರ ಕನ್ನಡ ಕ್ರಿಯಾ ಸಮಿತಿಯವರು ಏಪ್ರಿಲ್ ೧೮ ರಂದು ೬.೩೦ಕ್ಕೆ ತಮ್ಮ ತಮ್ಮ ಮನೆಗಳ ಮುಂದೆ ಗಂಗಾಳಗಳನ್ನು ಬಡಿದು ಪ್ರತಿಭಟಿಸಲು ಕೋರಿದ್ದು ವಿಶೇಷ ಅನ್ನಿಸಿತ್ತು. ಇದರಲ್ಲಿ ಆರ್.ಸಿ. ಹಿರೇಮಠ, ಎಸ್.ಶೆಟ್ಟರ್, ಚನ್ನವೀರ ಕಣವಿ, ರಾ. ಯ. ಧಾರವಾಡಕರ, ಪಾಟೀಲ ಪುಟ್ಟಪ್ಪ, ಮೊದಲಾದ ಅನೇಕರು ಗಂಗಾಳ ಮತ್ತು ಜಾಗಟೆಗಳನ್ನು ಬಾರಿಸುವುದರ ಮುಖೇನ ಚಳವಳಿಯನ್ನು ವಿನೂತನಗೊಳಿಸಿದ್ದರು. ಅಂತೆಯೇ ಮೈಸೂರಿನಲ್ಲಿ ನಟ ಎಂ. ಪಿ. ಶಂಕರ್ ಮೊದಲಾದವರು ತಮಟೆಗಳನ್ನು ಬಡಿದು ಪ್ರತಿಭಟಿಸಿದ್ದುಂಟು. ಏಪ್ರಿಲ್ ೧೮ರ ಒಳಗಾಗಿ ಎಲ್ಲ ಅಕಾಡೆಮಿ, ಸಂಘ-ಸಂಸ್ಥೆಗಳಿಗೆ (ಸಾಂಸ್ಕೃತಿಕವಾದವು) ರಾಜೀನಾಮೆ ನೀಡಲು ಕರೆ ನೀಡಿದ್ದುದರಿಂದ ಗಂಗೂಬಾಯಿ ಹಾನಗಲ್ ಮೊದಲಾದವರನ್ನೊಳಗೊಂಡ ಅನೇಕರು ರಾಜಿನಾಮೆಗಳನ್ನು ನೀಡಿದರು. ಇದರ ಜೊತೆಗೆ ನಾಡಿನ ಮಠ-ಮಾನ್ಯಗಳು ಗೋಕಾಕ್ ವರದಿಯನ್ನು ಜಾರಿಗೊಳಿಸಲು ಕರೆನೀಡಿದವು. ಉಡುಪಿಯ ಪೇಜಾವರ

ಮಠದ ಸ್ವಾಮಿಗಳು ಸಂಸ್ಕೃತಪರವಾಗಿದ್ದರು. ಅವರನ್ನು ಹೊರತುಪಡಿಸಿದರೆ ಗದಗಿನ ತೋಂಟದಾರ್ಯ ಮಠ, ಹುಬ್ಬಳ್ಳಿಯ ಮೂರು ಸಾವಿರ ಮಠ ಮೊದಲಾದವು ಬೆಂಬಲವನ್ನು ವ್ಯಕ್ತಪಡಿಸಿದ್ದವು. ಇದರಿಂದ ಸರ್ಕಾರವು ಎಚ್ಚೆತ್ತು ಏಪ್ರಿಲ್ ೧೮ರ ಸಂಪುಟ ಸಭೆಯ ನಿರ್ಣಯದಂತೆ 'ಭಾಷಾ ಸೂತ್ರ'ವೊಂದನ್ನು ಪ್ರಕಟಿಸಿತು. ಅಂದು ಸಂಜೆ ಧಾರವಾಡದಲ್ಲಿ ಚಳವಳಿ ತೀವ್ರಗೊಳಿಸಿದ್ದ ಕೇಂದ್ರ ಕ್ರಿಯಾ ಸಮಿತಿಯವರಿಗೆ ಆಶ್ಚರ್ಯ ಕಾದಿತ್ತು. ಏಕೆಂದರೆ ಸಂಜೆಯ ೬.೪೦ರ ಸುದ್ದಿ ಪ್ರಸಾರದಲ್ಲಿ ಸರ್ಕಾರವು ಭಾಷಾಸೂತ್ರವನ್ನು ಪ್ರಕಟಿಸಿದ್ದು ಹಾಗೂ ಅದನ್ನು ಸ್ವಾಗತಿಸಿದ ಹಿರಿಯ ಸಾಹಿತಿಗಳ ಹೆಸರುಗಳು ಒಟ್ಟೊಟ್ಟಿಗೆ ಪ್ರಸಾರ ಆದದ್ದರಿಂದ. ಅಂದರೆ ಚಳವಳಿಯನ್ನು ಮೊಟಕುಗೊಳಿಸಲು ಕವಿ ಕುವೆಂಪು ಹಾಗೂ ಹಂ.ಪ.ನಾ, ಹಾ. ಮಾ. ನಾಯಕರುಗಳು ಸ್ವಾಗತಿಸಿದರೆಂದು ಬಿತ್ತರಿಸಲಾಯಿತು. ಬೆಂಗಳೂರಿನಲ್ಲಿಯೂ ಸಾಹಿತಿಗಳ-ಕಲಾವಿದರ ಬಳಗದವರು ಏಪ್ರಿಲ್ ೨೦ರ ಸಮಾಲೋಚನ ಸಭೆಯಲ್ಲಿ ಚಳವಳಿಯನ್ನು ಹಿಂತೆಗೆದುಕೊಳ್ಳುವುದರ ಬಗ್ಗೆ ಸಿದ್ಧರಾದರು. ಆದರೆ 'ಕನ್ನಡ ಸಂಘರ್ಷ ಸಮಿತಿ'ಯ ರಹಮಾನ್ ಖಾನ್ ಸಂಗಡಿಗರು ಹಾಗೂ ನಟ ಲೋಕೇಶ್ ಮೊದಲಾದವರು ಚಳವಳಿಯನ್ನು ಮುಂದುವರೆಸಲು ಹಠತೊಟ್ಟಿದ್ದುಂಟು.[೧೨] ಏಕೆಂದರೆ ಸರ್ಕಾರದ ಭಾಷಾಸೂತ್ರದ ಪ್ರಕಟನೆ ಗೋಕಾಕ್ ವರದಿಯ ಯಥಾವತ್ ರೂಪ ಆಗಿರಲಿಲ್ಲ.

### ೬.೪.೧.೧೪ ಪೂರ್ಣ ಪ್ರಮಾಣದಲ್ಲಿ ಗೋಕಾಕ್ ವರದಿ ಜಾರಿಗೆ ಬರಲಿ

ಕನ್ನಡ ಚಳವಳಿಗಾರ ರಹಮಾನ್ ಖಾನ್ 'ಕನ್ನಡ ತಾಯಿಗೆ ಪ್ರಾಮಾಣಿಕವಾಗಿರಬೇಕೆ'ಂದು ಹೇಳಿದ್ದು ಅನೇಕ ಹಿರಿಯರಿಗೆ ಸಹಿಸಲು ಸಾಧ್ಯ ಆಗಲಿಲ್ಲ. ನಟ ಲೋಕೇಶ್ ಗೋಕಾಕ್ ವರದಿ ಪೂರ್ಣ ಪ್ರಮಾಣದಲ್ಲಿ ಜಾರಿಗೆ ಬರಲು ರಾಜಕುಮಾರ್ ಅವರನ್ನು ಚಳವಳಿಯ ಮುಂಚೂಣಿಗೆ ಬರಲು ಕೇಳಿಕೊಂಡರು. ಇದಕ್ಕೆ ಕನ್ನಡ ಚಲನಚಿತ್ರರಂಗದ ಎಲ್ಲ ನಟ-ನಟಿಯರು, ಕಾರ್ಯಕರ್ತರು ಮುಂದೆ ಬರಲು ಒಪ್ಪಿಕೊಂಡದ್ದುಂಟು. ಈ ಮಧ್ಯೆ ಸರ್ಕಾರದ ನಯವಂಚಕತನವನ್ನು ಪ್ರತಿಭಟಿಸಿ ಧಾರವಾಡದಲ್ಲಿ ಮೇ ೨೭ರಿಂದ 'ಜೈಲು ತುಂಬುವ' ಚಳವಳಿಯನ್ನು ಆರಂಭಿಸಲಾಯಿತು. ಬೆಂಗಳೂರಿನಲ್ಲೂ ಅನೇಕರು ಕಾರಾಗೃಹ ಸೇರುವ ಚಳವಳಿಯಲ್ಲಿ ಭಾಗವಹಿಸಿ ಮೊಕದ್ದಮೆಗಳನ್ನು ಹಾಕಿಸಿಕೊಂಡರು. ನಾಡಿನಾದ್ಯಂತ ಬಂದ್, ಮೆರವಣಿಗೆ, ಪೋಲೀಸರಿಂದ ಬಂಧನ ಮೊದಲಾದವು ನಿರಂತರವಾಗಿ ನಡೆದು ಸರ್ಕಾರ ಮಣಿದು ತಾನು 'ಮಾತುಕತೆಗೆ ಸಿದ್ಧ' ಎಂದು ಘೋಷಿಸಿತು. ಪ್ರಕಟಿಸಿದ ಭಾಷಾ ಸೂತ್ರವನ್ನು ಹಿಂತೆಗೆದುಕೊಳ್ಳದ ಹೊರತು ಮಾತುಕತೆಗೆ ಯಾರು ಸಿದ್ಧವಿಲ್ಲವೆಂದು ಪ್ರತಿಭಟನಕಾರರು ಸ್ಪಷ್ಟಪಡಿಸಿದರು. ಅನೇಕ ಶಾಲಾ-ಕಾಲೇಜು-ವಿಶ್ವವಿದ್ಯಾಲಯದ ಅಧ್ಯಾಪಕರಿಗೆ ಚಳವಳಿಯಲ್ಲಿ ಭಾಗವಹಿಸಿದ್ದಕ್ಕೆ ಕಾನೂನು ಕ್ರಮ ಕೈಗೊಳ್ಳುವುದರ ಬಗ್ಗೆ ಸರ್ಕಾರ ಹೆದರಿಸಿತು. ಅಲ್ಲದೆ ಗಂಗಾಧರ ಕೊರಳ್ಳಿಯವರು ತಮ್ಮ ೪೪ನೆಯ ಉಪವಾಸ ದಿನದಂದು ಪೋಲೀಸರಿಂದ ಬಂಧನಕ್ಕೊಳಗಾದರು. ಸೆರೆಮನೆಯಲ್ಲಿಯೂ ಕೊರಳ್ಳಿ ಅವರು ಉಪವಾಸವನ್ನು ಬಿಡಲಿಲ್ಲ. ಮೇ ೫ರಂದು ಗದಗಿನ ತೋಂಟದಾರ್ಯ ಸ್ವಾಮಿಜಿಗಳ ಒತ್ತಾಯದ ಮೇರೆಗೆ ಅವರು ತಮ್ಮ ಉಪವಾಸ ಸತ್ಯಾಗ್ರಹವನ್ನು (೪೯ ದಿನಗಳು) ಮೊಟಕುಗೊಳಿಸಿದರು. ಇಂಥ

ಹಲವು ಘಟನೆಗಳಿಂದ ನಾಡಿನಾದ್ಯಂತ ಚಳವಳಿ ದಿನೆ ದಿನೆ ಹೆಚ್ಚಾಗುತ್ತಾ ಹೋದದ್ದು ಗಮನಾರ್ಹ.

**೬.೪.೧.೧೫ ರಾಜಕುಮಾರ್ ಅವರೊಂದಿಗೆ ಜಾಥಾ**

ಧಾರವಾಡದ ಅಖಿಲ ಕರ್ನಾಟಕ ಕೇಂದ್ರ ಕನ್ನಡ ಕ್ರಿಯಾ ಸಮಿತಿಯಿಂದ ಡಾ. ರಾಜಕುಮಾರರಿಗೆ ಚಳವಳಿಗಾಗಿ ಜಾಥಾದಲ್ಲಿ ಭಾಗವಹಿಸಲು ಪತ್ರ ಮುಖೇನ ಕೇಳಿಕೊಳ್ಳಲಾಯಿತು. ಅವರನ್ನು ಒಳಗೊಂಡಂತೆ ಚಲನಚಿತ್ರರಂಗದ ತಂಡವು ಜಾಥಾ ಆರಂಭಿಸಿದ್ದು ಚಳವಳಿ ವ್ಯಾಪಕವಾಗಿ ಹರಡಲು ಕಾರಣವೆನ್ನಲಾಗಿದೆ. ಮೇ ೧೬ರಿಂದ ಬೆಳಗಾವಿಯಿಂದ ಆರಂಭಗೊಂಡ ಈ ಜಾಥಾವನ್ನು ಚಂದ್ರಶೇಖರ ಪಾಟೀಲ ಉಸ್ತುವಾರಿ ಮಾಡಿದ್ದರು. ರಾಜಕುಮಾರ್, ಲೋಕೇಶ್, ವಿಷ್ಣುವರ್ಧನ್, ಅನಂತನಾಗ್, ಅಶೋಕ್, ಚಿದಾನಂದಮೂರ್ತಿ, ಜಿ. ಕೆ. ಸತ್ಯ, ಪಿ. ವಿ. ನಾರಾಯಣ, ಪಾಟೀಲ ಪುಟ್ಟಪ್ಪ ಇನ್ನೂ ಅನೇಕರು ಮುಂದಾಳತ್ವವನ್ನು ವಹಿಸಿಕೊಂಡಿದ್ದರು. ಈ ಜಾಥಾವನ್ನು ಒಳಗೊಂಡ ಕನ್ನಡ ಚಳವಳಿ ಮೇ ೨೫ರಂದು ಬೆಂಗಳೂರಿನಲ್ಲಿ 'ಕನ್ನಡದ ಪಂಜು' ಬೆಳಗಿಸುವ ಕಾರ್ಯಕ್ರಮವನ್ನು ಹಾಕಿಕೊಂಡಿತು. ಪೋಲಿಸರ ತಡೆಗಳ ನಡುವೆ ಪಂಜು ಬೆಳಗಿಸಲು ಹೋದ ಅನೇಕ ಕಾರ್ಯಕರ್ತರು ಬಂಧನಕ್ಕೆ ಒಳಗಾದದ್ದು ಉಂಟು. ಮೇ ೨೭ರಂದು ಬೆಂಗಳೂರಿನ ಪುರಭವನದ ಎದುರು ಪಿ. ಲಂಕೇಶ್ ಅವರನ್ನು ಒಳಗೊಂಡಂತೆ ಅನೇಕ ಸಂಘಟನೆಗಳ ಕಾರ್ಯಕರ್ತರು ಬಂಧಿತರಾದರು.

**೬.೪.೧.೧೬ ಸರ್ಕಾರದೊಂದಿಗೆ ಮಾತುಕತೆ ಮತ್ತು 'ಭಾಷಾ ಸೂತ್ರ'ದ ಪ್ರಕಟನೆ**

ಗೋಕಾಕ್ ಚಳವಳಿ ಸರ್ಕಾರದ ಹತೋಟಿ ಮೀರಿ ಬೆಳದದ್ದರಿಂದ ಮುಖ್ಯಮಂತ್ರಿ ಗುಂಡೂರಾಯರು ಜೂನ್ ೪ರಂದು ಚಳವಳಿಕಾರರನ್ನು ಮಾತುಕತೆಗೆ ಕರೆದರು. ಈ ಸಭೆಯಲ್ಲಿ ಮಾಸ್ತಿ, ಶಿವರಾಮಕಾರಂತ, ಗೋರೂರು, ಕೆ. ವಿ. ಶಂಕರೇಗೌಡ, ರಾಜಕುಮಾರ್ ಮೊದಲಾದ ನಲವತ್ತಕ್ಕೂ ಹೆಚ್ಚಿನ ಗಣ್ಯರನ್ನು ಸೇರಿಸಿಕೊಳ್ಳಲಾಗಿತ್ತು. ಸಭೆಯಲ್ಲಿ ಮುಖ್ಯಮಂತ್ರಿಗಳು ಗೋಕಾಕ್ ವರದಿಯ ಪರಿಷ್ಕೃತ ಆದೇಶವನ್ನು ಹೊರಡಿಸುವ, ಬಂಧಿತ ಚಳವಳಿಕಾರರನ್ನು ಬಿಡುಗಡೆಗೊಳಿಸುವ ನಿರ್ಣಯಗಳನ್ನು ಪ್ರಕಟಿಸಿದರು. ಆದರೆ ಎಂದಿನಂತೆ ಸರ್ಕಾರವು ತನ್ನ ಮೌನ ವ್ರತವನ್ನು ಅನುಸರಿಸಿತು. ಇದರಿಂದ ಬೇಸತ್ತ ಕೇಂದ್ರ ಕನ್ನಡ ಕ್ರಿಯಾ ಸಮಿತಿಯು ಜೂನ್ ೨೧ರಿಂದ ಸರ್ಕಾರದ ವಿಳಂಬ ನೀತಿಯ ವಿರುದ್ಧ ಮತ್ತೆ ಚಳವಳಿ ಹೂಡದಿರಲಿಲ್ಲ. ಹುಬ್ಬಳ್ಳಿಯಲ್ಲಿ ಪಾಟೀಲಪುಟ್ಟಪ್ಪ, ಧಾರವಾಡದಲ್ಲಿ ಚಂಪಾ, ಎಂ. ಎಂ. ಕಲಬುರ್ಗಿ, ಧಾರವಾಡಕರ, ಬೆಂಗಳೂರಿನಲ್ಲಿ ಜಿ. ಎಸ್. ಎಸ್, ಲಂಕೇಶ್, ಬರಗೂರು, ಚಿದಾನಂದಮೂರ್ತಿ ಮೊದಲಾದವರು ಸಾವಿರಾರು ಸಂಖ್ಯೆಗಳಲ್ಲಿ ಸಭೆ ಸೇರಿ ಕಪ್ಪು ಬಟ್ಟೆಯನ್ನು ಸಂಕೇತಿಸಿ ಮೌನ ಮೆರವಣಿಗೆಯನ್ನು ನಡೆಸಿದರು. ಸರ್ಕಾರವು ಪರಿಸ್ಥಿತಿಗಳನ್ನು ಗಮನಿಸಿ 'ಸರ್ವಸಮ್ಮತ ಭಾಷಾ ಸೂತ್ರ'ವನ್ನು ಪ್ರಕಟಿಸಿತು. ವಿಧಾನ ಮಂಡಲದಲ್ಲಿ ಒಪ್ಪಿಗೆ ಪಡೆದ ಈ ಸೂತ್ರದ ಪ್ರಕಟನೆಯಿಂದ ನಾಲ್ಕು ತಿಂಗಳ ಕಾಲ ನಡೆದ ಗೋಕಾಕ್ ಚಳವಳಿಯು ಅಂತ್ಯಗೊಂಡಿತು.

### ೬.೪.೧.೧೭ ವಿಜಯೋತ್ಸವದಲ್ಲಿ ಆತ್ಮಾರ್ಪಣೆ

ಸರ್ಕಾರವು ಗೋಕಾಕ್ ವರದಿಯನ್ನು ಒಪ್ಪಿಕೊಂಡು ಭಾಷಾಸೂತ್ರವನ್ನು ಪ್ರಕಟಿಸಿದ ಹಿನ್ನೆಲೆಯಲ್ಲಿ ಕನ್ನಡ ಸಂಘಟನೆಗಳು, ಚಳವಳಿಕಾರರು ತಮ್ಮ ತಮ್ಮ ಸ್ಥಳಗಳಲ್ಲಿ ವಿಜಯೋತ್ಸವಗಳನ್ನು ಆಚರಿಸಿದ್ದುಂಟು. ಬೆಂಗಳೂರಿನಲ್ಲಿ ಈ ಕುರಿತು ಕರೆ ನೀಡಿದ್ದ ಸಾಹಿತಿಗಳ-ಕಲಾವಿದರ ಬಳಗವು ಡಾ. ರಾಜಕುಮಾರ್ ಅವರನ್ನು ಆಗಸ್ಟ್ ೧೧ರಂದು ಮೆರವಣಿಗೆ, ಸಭೆ ನಡೆಸಲು ಒಪ್ಪಿಸಿತು. ಆದರೆ ಈ ಮೆರವಣಿಗೆಯು, ಪೋಲೀಸರು ರಾಜಕುಮಾರ್ ಅವರನ್ನು ಮಾರ್ಗ ಬದಲಾಯಿಸಿ ಕರೆತರಲು ಹೊರಟಾಗ ಗಲಭೆಗೆ ಕಾರಣ ಆಯಿತು. ಕೆಲವು ಕಿಡಿಗೇಡಿಗಳ ವರ್ತನೆಗಳಿಗೆ ಪೋಲೀಸರು ಲಾಠಿ ಚಾರ್ಜ್, ಅಶ್ರುವಾಯು ಸಿಡಿಸಿದರು. ಪರಿಸ್ಥಿತಿ ತೀವ್ರ ಸ್ವರೂಪಕ್ಕೆ ಹೋದದ್ದರಿಂದ ಗೋಲಿಬಾರ್ ಸಹ ಆಯಿತು. ಇದರಲ್ಲಿ ಅರಸಪ್ಪನೆಂಬ ಕಾರ್ಮಿಕ ಪೋಲೀಸರ ಗುಂಡಿಗೆ ಬಲಿಯಾದ. ಇದೊಂದು ವಿಜಯೋತ್ಸವ ಆಗುವ ಬದಲು ಸಂತಾಪ ಸೂಚಕ ಸಭೆಯಾಗಿ ಮಾರ್ಪಟ್ಟಿತು.

### ೬.೪.೧.೧೮ ಗೋಕಾಕ್ ಚಳವಳಿಯನ್ನು ವಿರೋಧಿಸಿದವರು

ಗೋಕಾಕ್ ವರದಿಯ ಅನುಷ್ಠಾನದ ವಿಚಾರದಲ್ಲಿ ನಡೆದ ಈ ದೀರ್ಘವಾದ ಚಳವಳಿಯು ಏಕೀಕರಣ ಚಳವಳಿಗಿಂತಲೂ ತೀಕ್ಷ್ಣವಾದುದು. ಚಳವಳಿಯು ಕನ್ನಡಿಗರಿಂದ ತೀವ್ರ ಸ್ವರೂಪದಲ್ಲಿ ನಡೆದರೂ ಇದಕ್ಕೆ ಅಡೆ-ತಡೆಗಳನ್ನು ಒಡ್ಡದವರು ಇರಲಿಲ್ಲ ಎಂದು ಹೇಳಲಾಗುವುದಿಲ್ಲ. ಚಳವಳಿಯ ಆರಂಭ ಘಟ್ಟದಿಂದ ಹಿಡಿದು ಅದು ಕೊನೆ ಮುಟ್ಟುವವರೆಗೂ ಅನೇಕರು ತಕರಾರುಗಳನ್ನು ತೆಗೆದದ್ದು ಉಂಟು. ಯು.ಆರ್. ಅನಂತ ಮೂರ್ತಿ ಅವರು ಚಳವಳಿಯ ಒಂದು ಘಟ್ಟದಲ್ಲಿ ಇದನ್ನು 'ಸಮೂಹ ಸನ್ನಿ' ಎಂದು ಕರೆದರು.[೧೩] ಪೇಜಾವರ ಶ್ರೀಗಳಂತೂ ಚಳವಳಿಯ ವಿರುದ್ಧವೇ ಇದ್ದವರು. ಬೆಳಗಾವಿಯ 'ಮಹಾರಾಷ್ಟ್ರ ಏಕೀಕರಣ ಸಮಿತಿ'ಯವರು ವರದಿಯನ್ನು ವಿರೋಧಿಸಿ ಬಂದ್‌ಗೆ ಕರೆ ಕೊಟ್ಟದ್ದೂ ಇದೆ.[೧೪] ಕನ್ನಡ ಚಳವಳಿ ನಾಯಕ ವಾಟಾಳ್ ನಾಗರಾಜ್, ಪರಿಷತ್ತಿನ ಅಧ್ಯಕ್ಷ ಹಂ. ಪ. ನಾಗರಾಜಯ್ಯ ಹಾಗೂ ಹಾ. ಮಾ. ನಾಯಕ ಅವರುಗಳು ಚಳವಳಿಯನ್ನು ಬೆಂಬಲಿಸಲಿಲ್ಲ. ಅಂತೆಯೇ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಮೂವರು ಕನ್ನಡ ಪ್ರಾಧ್ಯಾಪಕರು 'ಕನ್ನಡ ದ್ರೋಹಿ'ಗಳು ಎಂದು ಕರೆಸಿಕೊಂಡದ್ದೂ ಇದೆ.[೧೫] ಅಲ್ಪಸಂಖ್ಯಾತರ ನಾಯಕರೆನಿಸಿದ ಅಜೀಜ್ ಸೇಠ್ ಮತ್ತು ಕೆಲವು ಸಂಸ್ಕೃತ ಪರವಾದಿಗಳು ಭಾಷಾಸೂತ್ರ ಪ್ರಕಟ ಆದ ಮೇಲೆ ಕೋರ್ಟಿನಲ್ಲಿ ದಾವೆ ಹೂಡಿ ತಡೆಯಾಜ್ಞೆ ತಂದರು.

### ೬.೪.೧.೧೯ ರಿಟ್‌ಗಳ ವಿಲೇವಾರಿ ಮತ್ತು ವರದಿ ಜಾರಿಗೆ

ನ್ಯಾಯಾಲಯದಲ್ಲಿನ ರಿಟ್‌ಗಳು ತೆರವು ಆಗುವವರೆಗೆ 'ಗೋಕಾಕ್ ಭಾಷಾಸೂತ್ರ'ವನ್ನು ಸರ್ಕಾರ ಜಾರಿ ಮಾಡಲು ಒಪ್ಪಲಿಲ್ಲ. ಕನ್ನಡೇತರರು, ಅಲ್ಪಸಂಖ್ಯಾತರು ಒಂದನೇ ತರಗತಿಯಿಂದಲೂ, ಸಂಸ್ಕೃತಪರವಾದಿಗಳು ಸಂಸ್ಕೃತವನ್ನು ಮೂರನೆ ಸ್ಥಾನದಲ್ಲಿರಿಸಿದ್ದರಿಂದಲೂ ಕನ್ನಡವನ್ನು ಕಲಿಯಲು ವಿರೋಧಿಸಿದರು. ಹೀಗಾಗಿ ಕನ್ನಡ ಭಾಷಾ ಚಳವಳಿ ಪೂರ್ಣವಾಗಿ ಸ್ಥಗಿತ ಆಗಲಿಲ್ಲ. 'ಕನ್ನಡ ಸಂಘರ್ಷ ಸಮಿತಿ'ಯ ರಹಮಾನ್

ಖಾನ್ ಮತ್ತು ಗೆಳೆಯರು ೧-೧೧-೧೯೮೨ರ ರಾಜ್ಯೋತ್ಸವದ ದಿನವನ್ನು 'ಕರಾಳ ದಿನ'ವನ್ನಾಗಿ ಆಚರಿಸಲು ಕರೆ ನೀಡಿದರು. ಗೋಕಾಕ್ ಭಾಷಾಸೂತ್ರದ ವಿರುದ್ಧ ಹಾಕಲಾಗಿದ್ದ ರಿಟ್ ಅರ್ಜಿಗಳನ್ನು ಮುಕ್ತಗೊಳಿಸಿದ ಗುಂಡೂರಾಯರ ಸರ್ಕಾರ ಸಾಹಿತಿಗಳಿಗೆ ಪ್ರಶಸ್ತಿಗಳನ್ನು ನೀಡುವ ಸಮಾರಂಭವೊಂದನ್ನು ಅಣಿಗೊಳಿಸಿತ್ತು. ಈ ಸಮಾರಂಭದಲ್ಲಿ ವಿಶ್ವಕನ್ನಡ ಮೇಳಕ್ಕೆ ಬಹಿಷ್ಕಾರ, ಪ್ರಶಸ್ತಿಗಳನ್ನು ಹಿಂತಿರುಗಿಸಲು ಒತ್ತಾಯಿಸಿ ರಹಮಾನ್ ಖಾನ್, ನಾಗರಾಜಮೂರ್ತಿ ಮೊದಲಾದವರು ಕಪ್ಪು ಬಟ್ಟೆಗಳನ್ನು ಎಸೆದದ್ದು ಗಮನಾರ್ಹ. ಇದರಿಂದ ರಹಮಾನ್ ಖಾನರನ್ನು ಬಂಧಿಸಿದ ಪೋಲಿಸರು ಸಾಯುವಂತೆ ಬಡಿದದ್ದುಂಟು.[೧೬] ಇಂಥ ಘಟನೆಗಳ ನಡುವೆ ಕಾಂಗ್ರೆಸ್ ಸರ್ಕಾರ ಪತನಗೊಂಡು 'ಜನತಾ ಸರ್ಕಾರ' ಅಧಿಕಾರಕ್ಕೆ ಬಂದಿತ್ತು. ಜನತಾ ಪಕ್ಷವು ೧೯೮೩ರಲ್ಲಿ ಅಧಿಕಾರಕ್ಕೆ ಬರಲು ಅದುವರೆವಿಗೂ ನಡೆದ ರೈತ ಚಳವಳಿ, ಭಾಷಾಚಳವಳಿ ಹಾಗೂ ದಲಿತ ಚಳವಳಿಗಳೇ ಕಾರಣ. ಈ ಮೂರು ಚಳವಳಿಗಳ ಆಶೋತ್ತರಗಳನ್ನು ಈಡೇರಿಸುವ ಭರವಸೆ ನೀಡಿ ಜನತಾ ಸರ್ಕಾರವು ಅಧಿಕಾರಕ್ಕೆ ಬಂದಿತ್ತು. ಅಧಿಕಾರಕ್ಕೆ ಬಂದ ಮೇಲೆ ಅದೂ ಸಹ ಕನ್ನಡವನ್ನು ಮುಗಿಸುವ 'ನಯವಂಚಕತನ'ವನ್ನೇ ಮಾಡಿತು.[೧೭]

ನೆನೆಗುದಿಗೆ ಬಿದ್ದಿದ್ದ ಭಾಷಾ ಸೂತ್ರವನ್ನು ಕರ್ನಾಟಕದ ಉಚ್ಚನ್ಯಾಯಾಲಯವು ೧೯೮೪ರ ಜನವರಿ ೨೪ರಂದು ರಿಟ್‌ಗಳನ್ನು ವಿಲೇವಾರಿ ಮಾಡುವುದರ ಮುಖೇನ ಆಜ್ಞೆ ಹೊರಡಿಸಿತು. ಇದರಿಂದ ಗೋಕಾಕ್ ಚಳವಳಿಯ ಭಾಷಸೂತ್ರವನ್ನು ಜಾರಿಗೆ ತರುವಲ್ಲಿ ಗೆಲುವನ್ನು ಸಾಧಿಸಿದಂತಾಯಿತು.[೧೮]

### ಟಿಪ್ಪಣಿಗಳು

೧. ವೈಕುಂಠರಾಜು, ಬಿ. ವಿ., ಸಂಪಾದಕರ ಡೈರಿ, ೧೯೮೬, (ಬೆಂ, ೧೯೯೩).

೨. ಪೂಜಾರ ನೀಲಗಂಗಯ್ಯ ಮತ್ತು ದೊಡ್ಡಮೇಟಿ ಜ್ಞಾನದೇವ (ಸಂ). ರಾಜ್ಯದ ಹೆಸರು 'ಕರ್ನಾಟಕ'ವೆಂದೇ ಆಗಬೇಕು, (ಬೆಂ). ದೊಡ್ಡಮೇಟಿ ಅಂದಾನಪ್ಪನವರು ಅಂದು ಶಾಸಕರಾಗಿದ್ದುದರಿಂದ ತಮ್ಮ ಹೆಸರಿನಲ್ಲಿ ಈ ಕೃತಿಯನ್ನು ಪ್ರಕಟಿಸುವುದು ತಾಂತ್ರಿಕವಾಗಿ ತೊಂದರೆಗಳಿಗೆ ಎಡೆ ಮಾಡಿಕೊಡುತ್ತದೆ ಎಂದು ಬೇರೆ ಹೆಸರುಗಳಲ್ಲಿ ಪ್ರಕಟಿಸಿದರು.

೩. ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ವ್ಯಕ್ತವಾದ ಅಭಿಪ್ರಾಯಗಳನ್ನು ಪರಿಗಣಿಸಲಾಗಿದೆ.

೪. ಕರ್ನಾಟಕ ಸರ್ಕಾರಿ ಆದೇಶದ ಸಂಖ್ಯೆ - 'ಕ್ರಮಾಂಕ, ಇಡಿ-೧೧೩/ಎಸ್‌ಓಎಚ್/೭೯ ದಿನಾಂಕ ೩ನೆ ಜುಲೈ ೧೯೮೦).

೫. ಈ ಹೇಳಿಕೆಯನ್ನು ಪ್ರೊ. ಚಂದ್ರಶೇಖರ ಪಾಟೀಲ (ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಸರ್ಕಾರ) ಅವರ ಸಂದರ್ಶನದ ಆಯ್ದ ಭಾಗದಿಂದ ತೆಗೆದುಕೊಳ್ಳಲಾಗಿದೆ. (ಧ್ವನಿ ಸುರುಳಿ ಇದೆ).

೬. ಗೋಕಾಕ ಅವರ ನೇತೃತ್ವದ ಭಾಷಾ ಸಮಿತಿಯ ಬಗೆಗೆ ಮೊಟ್ಟ ಮೊದಲು ತಕರಾರನ್ನು ವ್ಯಕ್ತಪಡಿಸಿ 'ಸಂಯುಕ್ತ ಕರ್ನಾಟಕ' (೨೩-೧೦-೧೯೮೨) ದಿನ ಪತ್ರಿಕೆಯಲ್ಲಿ ಡಾ. ಎಂ. ಎಂ. ಕಲಬುರ್ಗಿ ಅವರು ತಮ್ಮ ನಿಲುವನ್ನು ಪ್ರಕಟಿಸಿದರು ಎಂದು ಹೇಳಿಕೊಂಡಿದ್ದಾರೆ. ಈ ಕುರಿತು ಅವರನ್ನು ಸಂದರ್ಶಿಸಿ, ದಾಖಲು ಮಾಡಿಕೊಳ್ಳಲಾಗಿದೆ. (ಧ್ವನಿ ಸುರುಳಿ ಇದೆ).

೭. ಈ ಸಂದರ್ಭದಲ್ಲಿ 'ಬಂಡಾಯ ಸಾಹಿತ್ಯ ಸಂಘಟನೆ'ಯು ಮೊಟ್ಟಮೊದಲ ಬಾರಿಗೆ 'ಕನ್ನಡ ಹೋರಾಟ' ಎಂಬ ಕಿರು ಕೃತಿಯನ್ನು ಹಂಚುವುದರ ಮೂಲಕ ಜಾಗೃತಿ ಮೂಡಿಸಿತು. ಇದರಲ್ಲಿ ಬರಗೂರು ರಾಮಚಂದ್ರಪ್ಪ, ಕೆ. ವಿ. ನಾರಾಯಣ ಮೊದಲಾದವರು ಇದ್ದರು. 'ಸಂಸ್ಕೃತ ವಿರೋಧಿ ವಾರ'ವನ್ನೂ ಆಚರಿಸಲಾಯಿತು.

ಡಿ. ಆರ್. ನಾಗರಾಜ, ಕಿ. ರಂ. ನಾಗರಾಜ, ಅಗ್ರಹಾರ ಕೃಷ್ಣಮೂರ್ತಿ ಮೊದಲಾದ ಸಾಹಿತಿಗಳು ಗೋಕಾಕರನ್ನು ಭೇಟಿ ಮಾಡಿ ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದು ಉಂಟು.

೮. ಭಾಷಾ ಸಮಿತಿಯ ವರದಿ (ಡಾ. ಗೋಕಾಕ್ ಸಮಿತಿ ವರದಿ), ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ, (ಬೆಂ), ಪು-೧೯.

೯. ಪ್ರೊ. ಚಂದ್ರಶೇಖರ ಪಾಟೀಲರೊಂದಿಗೆ ನಡೆಸಿದ ಸಂದರ್ಶನದಲ್ಲಿ ವ್ಯಕ್ತವಾದ ವಿಚಾರ.

೧೦. ನಾರಾಯಣ, ಪಿ. ವಿ., ಗೋಕಾಕ್ ವರದಿ ಅನುಷ್ಠಾನದ ಸ್ಥಿತಿ-ಗತಿ, ಅಖಿಲ ಕರ್ನಾಟಕ ಕೇಂದ್ರ ಕನ್ನಡ ಕ್ರಿಯಾ ಸಮಿತಿಯ ಪ್ರಕಟನೆ, (ಧಾ, ೧೯೯೫), ಪು. ೬-೭.

೧೧. ರಾಮಣ್ಣ ಎಚ್. ಕೋಡಿ ಹೊಸಹಳ್ಳಿ, (ಸಂ)., ಕನ್ನಡದ ಧೀಮಂತ ಹೋರಾಟಗಾರ ರಹಮಾನ್ ಖಾನ್, (ಬೆಂ, ೧೯೯೫). ಕನ್ನಡದ ಪ್ರಮುಖ ಚಳವಳಿಗಾರರಲ್ಲಿ ಒಬ್ಬರೆನ್ನಿಸಿದ್ದ ರಹಮಾನ್ ಖಾನರನ್ನು ಕುರಿತ ಈ 'ಶ್ರದ್ಧಾಂಜಲಿ ಸ್ಮರಣ ಸಂಚಿಕೆ'ಯಲ್ಲಿನ 'ದಶಕ ಪುರುಷ' ಎಂಬ ಲೇಖನದ ಉಲ್ಲೇಖ. ಪು-೧.

೧೨. ರಹಮಾನ್ ಖಾನ್ ಬರೆದಿರುವ ಲೇಖನದ ಉಲ್ಲೇಖ 'ಸಂಕ್ರಮಣ' (ಮಾ ೩೦- ಏ ೬, ೧೯೮೬) ಮೊದಲ ಸಂಚಿಕೆ, ಪು-೧೪.

೧೩. ಅಂದು ಯು. ಆರ್. ಅನಂತಮೂರ್ತಿ ಅವರು 'ಪೀಪಲ್ಸ್ ಯೂನಿಯನ್ ಆಫ್ ಸಿವಿಲ್ ಲಿಬರ್ಟೀಸ್'ನ ಕಾರ್ಯದರ್ಶಿಯಾಗಿದ್ದರು. ಚಳವಳಿಯಲ್ಲಿ ಪೋಲೀಸರ ವರ್ತನೆ ಕುರಿತು ಜನತೆಯನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲು ಬಂದಾಗ ಅವರ ವಿರುದ್ಧ ಘೋಷಣೆಗಳನ್ನು ಕೂಗಲಾಯಿತು.

೧೪. ೧೫-೬-೧೯೮೨ ರಂದು ಬೆಳಗಾವಿಯಲ್ಲಿ ಬಂದ್‌ನ್ನು ಆಚರಿಸಲಾಯಿತು.

೧೫. ಈ ಮೂವರಿಗೆ ಇದ್ದ ಡಾಕ್ಟರೇಟ್ ಪದವಿಗಳಿಂದ ಇವರನ್ನು 'ಮೂರು ಡಾ'ಗಳು (ಡಾ. ಬುದ್ಧಣ್ಣ ಹಿಂಗಮಿರೆ, ಡಾ. ಕೊಟ್ರಶೆಟ್ಟಿ, ಡಾ. ಇಮ್ರಾಪುರ) ಎಂದೂ, ಬೆಂಗಳೂರಿನ ಕಡೆಯ 'ಮೂರು ನಾ'ಗಳೆಂದು (ವಾಟಾಳ್ ನಾಗರಾಜ್, ಹಂ. ಪ. ನಾಗರಾಜಯ್ಯ, ಹಾ. ಮಾ. ನಾಯಕ್) ಕರೆದು 'ಸಂಕ್ರಮಣ'ದಲ್ಲಿ ಲೇವಡಿ ಮಾಡಿ ಬರೆದುದರ ಬಗ್ಗೆ ಚಂಪಾ ಅವರು ನೆನಪು ಮಾಡಿಕೊಂಡುದ್ದರ ಉಲ್ಲೇಖ.

೧೬. ಚಳವಳಿಗಾರ ರಹಮಾನ್ ಖಾನ್ ಅವರು ಖುದ್ದಾಗಿ ಬರೆದ ತಮ್ಮ ಅನುಭವಗಳನ್ನು ಕುರಿತ ಲೇಖನ. 'ಸಂಕ್ರಮಣ' ಮೊದಲ ಸಂಚಿಕೆ (ಮಾರ್ಚ್ ೩೦ - ಏಪ್ರಿಲ್ ೬, ೧೯೮೬), ಧಾರವಾಡ, ಪು-೧೪.

೧೭. ರಹಮಾನ್ ಖಾನ್, ಮೇಲಿನದೆ, ಪು-೧೪.

೧೮. ಗೋಕಾಕ್ ಚಳವಳಿಯ ವಿಸ್ತೃತದ ಕೆಲವು ವಿವರಗಳನ್ನು ವಿಶ್ಲೇಷಿಸಲು ಡಾ. ನಂ. ಚಂದ್ರಶೇಖರ ಅವರ ಇತ್ತೀಚಿನ ಕೃತಿ 'ಕನ್ನಡ ಹೋರಾಟಗಳು'ನ್ನು (ಬೆಂ, ೧೯೯೯) ಆಧಾರವನ್ನಾಗಿಸಿಕೊಳ್ಳಲಾಗಿದೆ.

❑❑

## ೭.೧.೧ ಕನ್ನಡ ಚಳವಳಿಯ ಕಳೆದ ಎರಡು ದಶಕಗಳು

ಜನಪರವಾದ, ರಾಜ್ಯವ್ಯಾಪಿಯಾದ 'ಗೋಕಾಕ್ ಚಳವಳಿ'ಯು ೧೯೮೦ರ ದಶಕದ 'ಕನ್ನಡ ಚಳವಳಿ'ಗಳಲ್ಲಿ ಮಹತ್ವದ್ದು. ಬಹುಶಃ ಈ ಹಿನ್ನೆಲೆಯ ಚಳವಳಿಗಳಲ್ಲಿ ಇದೆ ಅಂತಿಮವಾದುದು. ನಂತರದ ಕನ್ನಡ ಚಳವಳಿಗಳು ಕನ್ನಡಿಗರ ಆಶೋತ್ತರಗಳನ್ನು ಬಂಡವಾಳ ಮಾಡಿಕೊಂಡ ರಾಜಕಾರಣದ ಚಹರೆಗಳನ್ನು ಅಭಿವ್ಯಕ್ತಗೊಳಿಸಿದಂಥವು. ೧೯೮೦ ಹಾಗೂ ೧೯೯೦ರ ದಶಕದ, ಅಂದರೆ ಎರಡು ದಶಕಗಳ ಕನ್ನಡ ಚಳವಳಿಗಳಿಗೆ ವಿಭಿನ್ನ ರೀತಿಯ ಚಳವಳಿ ನಾಯಕರು, ಸಂಘಟನೆಗಳು, ಆಶೋತ್ತರಗಳು ಸೇರಿಕೊಡದ್ದೇ ಹೆಚ್ಚು. ಹೀಗಾಗಿ ಇಪ್ಪತ್ತು ವರುಷಗಳು ಕನ್ನಡಿಗರಿಗೆ ಒಂದು ನಿಟ್ಟಿನಲ್ಲಿ ಸಂಕೀರ್ಣವಾದ ಪರಿಸರವನ್ನು ಸೃಷ್ಟಿಸಿದವು ಎಂದರೆ ತಪ್ಪಾಗಲಾರದು. ಈ ಅವಧಿಯಲ್ಲಿನ ರಾಜಕಾರಣವು ಸಹ 'ಕನ್ನಡ-ಕನ್ನಡಿಗ-ಕರ್ನಾಟಕ' ಎಂಬ ಪರಿಕಲ್ಪನೆಗಳನ್ನು ಬಂಡವಾಳ ಮಾಡಿಕೊಂಡಿತು. ಆಯಾ ಸಂದರ್ಭಕ್ಕೆ ಅನುಗುಣವಾಗಿ ವಿವಿಧ ಸಂಘಟನೆಗಳು, ರಾಜಕಾರಣಿಗಳ ಅಥವ ರಾಜಕೀಯ ಪಕ್ಷಗಳ ಬೆಂಬಲವನ್ನು ಪಡೆಯುವುದರೊಂದಿಗೆ ಕನ್ನಡ ಚಳವಳಿಯನ್ನು ವಿವಿಧ ರೀತಿಯಲ್ಲಿ ಮುನ್ನಡೆಸಿಕೊಂಡು ಬಂದಿವೆ. ಗೋಕಾಕ್ ಚಳವಳಿಯ ಅಂತ್ಯದೊಂದಿಗೆ ಕಳೆದ ೩೯ ವರುಷಗಳು (೧೯೪೭-೧೯೮೩) ಕಾಂಗ್ರೆಸ್ ಪಕ್ಷದ ಆಡಳಿತವನ್ನು ಸಹ ಕೊನೆಗಾಣಿಸಿದ್ದು ಕನ್ನಡಿಗರ ಬದಲಾವಣೆಯ ಮನಸ್ಥಿತಿಗಳನ್ನು ಅಭಿವ್ಯಕ್ತಗೊಳಿಸುವಂಥದ್ದು. ಈ ಸನ್ನಿವೇಶದಲ್ಲಿದ್ದ ರೈತ ಚಳವಳಿ, ಭಾಷಾ ಚಳವಳಿ, ದಲಿತ ಚಳವಳಿಗಳ ಮೊದಲಾದ ಆಶೋತ್ತರಗಳನ್ನು ಈಡೇರಿಸುವ ಭರವಸೆಯನ್ನು ನೀಡಿ ಅಧಿಕಾರಕ್ಕೆ ಬಂದದ್ದೇ 'ಜನತಾ ಪಕ್ಷ'ದ ಸರ್ಕಾರ. ಆದರೆ ಬಹಳ ಬೇಗನೆ ಈ ಸರ್ಕಾರವು ಸಹ ಕನ್ನಡಿಗರ ಅಸಹನೆಗೆ ಗುರಿ ಆದದ್ದು ಗಮನಾರ್ಹ. ಪ್ರಬಲವಾದ ರಾಜ್ಯಪಕ್ಷವೊಂದರ ಅಸ್ತಿತ್ವಕ್ಕೆ ಹಾತೊರೆವ ಸ್ಥಿತಿಗತಿಗಳು ಹುಟ್ಟಿಕೊಂಡವು. ಇವುಗಳ ಪರಿಣಾಮವಾಗಿ ಮುಂದೆ ಹುಟ್ಟಿಕೊಂಡದ್ದೇ 'ಕನ್ನಡ ದೇಶ' (೧೯೮೭), 'ಕರ್ನಾಟಕ ಪ್ರಗತಿ ರಂಗ' (೧೯೮೮) ಥರದ ಪ್ರಗತಿಪರವಾದ ರಾಜಕೀಯ ಪಕ್ಷಗಳು.

### ೭.೨.೧ 'ಕನ್ನಡ ದೇಶ' ಮತ್ತು 'ಕರ್ನಾಟಕ ಪ್ರಗತಿರಂಗ'

ರಾಷ್ಟ್ರೀಯ ಪಕ್ಷಗಳು ರಾಜ್ಯಗಳಲ್ಲಿನ ತಮ್ಮದಲ್ಲದ ಪಕ್ಷದ ಸರ್ಕಾರಗಳೊಂದಿಗೆ ತಾರತಮ್ಯದಿಂದ ವರ್ತಿಸಲು ಆರಂಭಿಸಿದವು. ಇದರಿಂದ ರಾಜ್ಯಗಳಲ್ಲಿನ ಪ್ರಾದೇಶಿಕವಾದ ಸಮಸ್ಯೆಗಳು ಬಗೆಹರಿಯುವ ಲಕ್ಷಣಗಳು ಕಾಣಲಿಲ್ಲ. ಕರ್ನಾಟಕದ ಸಂದರ್ಭದಲ್ಲಿ ರಾಜ್ಯದಲ್ಲಿ ಅಧಿಕಾರಕ್ಕೆ ಬಂದಿದ್ದ (೧೯೮೩ರಲ್ಲಿ) 'ಜನತಾಪಕ್ಷ'ಕ್ಕೆ ಕೇಂದ್ರ 'ಕಾಂಗ್ರೆಸ್' ಸರ್ಕಾರ

ಮಲತಾಯಿ ಧೋರಣೆಯನ್ನು ವ್ಯಕ್ತಪಡಿಸಿತು. ರಾಷ್ಟ್ರೀಯ ಪಕ್ಷಗಳು ಸೈದ್ಧಾಂತಿಕವಾಗಿ ಮಾತನಾಡಿದರೂ ಬಡತನ, ನಿರುದ್ಯೋಗ, ಅಸಮಾನತೆ, ಭ್ರಷ್ಟಾಚಾರಗಳನ್ನು ಪೆಚ್ಚಿ ಮಾಡಿದವು. ರಾಜ್ಯದ ಜನತಾ ಸರ್ಕಾರವು ಕಾಂಗ್ರೆಸ್ಸಿಗರನ್ನು ಜರೆದು ಅಧಿಕಾರಕ್ಕೆ ಬಂದು ಅವರಿಗಿಂತಲೂ ಹೆಚ್ಚಿನ ಭ್ರಷ್ಟಾಚಾರಗಳನ್ನು ಹುಟ್ಟು ಹಾಕಿತು.[೧] ಈ ಬಗ್ಗೆ ಕನ್ನಡಿಗರಿಗೆ ಇವೆರಡನ್ನೂ ಹೊರತುಪಡಿಸಿದ ಮೂರನೆಯ ರಾಜಕೀಯ ಪಕ್ಷವೊಂದರ ಜರೂರು ತೀವ್ರವಾಗಿ ಕಾಣಿಸಿಕೊಂಡಿತು. ಆದರೆ ಪ್ರಾದೇಶಿಕವಾದ ಈ ಮೂರನೆಯ ಶಕ್ತಿ ಸಂಪೂರ್ಣವಾಗಿ ನಾಡು-ನುಡಿ, ಸಂಸ್ಕೃತಿಗಳನ್ನೊಳಗೊಂಡಂತೆ ಕರ್ನಾಟಕದ ಪ್ರಗತಿಗೆ ಶ್ರಮಿಸುವಂತಿರಬೇಕು. ಈ ಆಶೋತ್ತರಗಳು ಕನ್ನಡ ಚಳವಳಿಯ ಹಿನ್ನೆಲೆಯಿಂದ ಬಂದಿದ್ದೂ, ಈಗಾಗಲೇ ಅಸ್ತಿತ್ವದಲ್ಲಿದ್ದ ವಾಟಾಳರ ಪಕ್ಷವು ಪ್ರಾದೇಶಿಕವೆನ್ನಿಸಿದ್ದರೂ ರಾಜ್ಯವ್ಯಾಪಿ ಆಗಿರಲಿಲ್ಲ. ಈ ಕೊರತೆಗಳೆಲ್ಲವನ್ನೂ ಕನ್ನಡಿಗರು ಅರಿತುಕೊಂಡು ೧೯೮೭ರಲ್ಲಿ 'ಕನ್ನಡ ದೇಶ' ಪಕ್ಷಕ್ಕೆ ನಾಂದಿ ಹಾಡಿದರು. ಈ ಪಕ್ಷವು ರಾಷ್ಟ್ರಕವಿ ಕುವೆಂಪು ಅವರ ಸಲಹೆ, ಆಶೀರ್ವಾದಗಳೊಂದಿಗೆ ಅಸ್ತಿತ್ವಕ್ಕೆ ಬಂದಿತ್ತು.[೨] 'ಕನ್ನಡ ದೇಶ' ಪಕ್ಷವು ಹೊಸ ಕರ್ನಾಟಕದ ನಿರ್ಮಾಣಕ್ಕಾಗಿ ತನ್ನದೇ ಆದ ಬಾವುಟವನ್ನು ಹೊಂದಿ ಕ್ರಿಯಾಶೀಲವಾಯಿತು.[೩] ಆದರೆ ಕನ್ನಡಿಗರ ಎಂದಿನ ನಿರ್ಲಕ್ಷ್ಯಗಳಿಗೆ ಈ ರಾಜಕೀಯ ಪಕ್ಷವು ಸಹ ತನ್ನ ಆಶಯಗಳನ್ನು ಈಡೇರಿಸಿಕೊಳ್ಳುವಲ್ಲಿ ಪ್ರಗತಿ ಕಾಣಲಿಲ್ಲ. ಅಂದು ಈ 'ಪಕ್ಷ'ದ ನೇತೃತ್ವವನ್ನು ವಹಿಸಿದ್ದವರು 'ರೈತ ಸಂಘ'ದ ನಾಯಕರಾದ ಪ್ರೊ. ಎಂ. ಡಿ. ನಂಜುಂಡಸ್ವಾಮಿಯವರು.

'ಕನ್ನಡ ದೇಶ'ದ ಕಣ್ಮರೆಯನ್ನು ಗಮನಿಸಿದ ನಾಡಿನ ಕೆಲವು ಪ್ರಗತಿಪರವಾದ ಮನಸ್ಸುಳ್ಳ ವ್ಯಕ್ತಿಗಳು ಅದುವರೆಗಿನ ಎಲ್ಲ ಕೊರತೆಗಳನ್ನು ಕಂಡು ೧೯೮೮ರಲ್ಲಿ 'ಕರ್ನಾಟಕ ಪ್ರಗತಿರಂಗ'ವನ್ನು ನಿರ್ಮಿಸಲು ಹೊರಟರು. ಅದರಲ್ಲಿ ಪಿ. ಲಂಕೇಶ ಅವರ ನೇತೃತ್ವ ಪ್ರಧಾನವಾದುದು. ಅವರೊಂದಿಗೆ ಕೆ. ರಾಮದಾಸ್, ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಡಾ. ಕೆ. ಎಂ. ಶ್ರೀನಿವಾಸ ಗೌಡ, ಎಚ್. ಎಲ್. ಕೇಶವಮೂರ್ತಿ ಅವರ ಸಂಚಾಲಕತ್ವವು ಇತ್ತು.[೪] ಕರ್ನಾಟಕದಲ್ಲಿನ ಕಾಂಗ್ರೆಸ್ ಮತ್ತು ಜನತಾ ಪಕ್ಷಗಳಿಗೆ ಪರ್ಯಾಯವಾಗಿ ಮೂರನೆ ರಾಜಕೀಯ ಶಕ್ತಿ, ಸಿದ್ಧಾಂತಗಳೊಂದಿಗೆ ಹುಟ್ಟಿಕೊಂಡಿದ್ದೇ 'ಕರ್ನಾಟಕ ಪ್ರಗತಿ ರಂಗ'. ಇದಕ್ಕೆ ಕನ್ನಡಿಗರು 'ಪತ್ರಿಕೆ'ಯ ಮೂಲಕ ರೂಪಿಸಿದ ಕಾರ್ಯಕ್ರಮಗಳ ಹಿನ್ನೆಲೆ ಇತ್ತು.[೫] ನಾಡಿನ ಜನರ ಆಶೋತ್ತರಗಳ ಪ್ರತೀಕವಾಗಿ 'ಪ್ರಗತಿರಂಗ'ದ ಪ್ರಣಾಳಿಕೆ, ಕಾರ್ಯಕ್ರಮಗಳು ರಚನೆಗೊಂಡವು.[೬] ಆದರೆ ಕನ್ನಡಿಗರ ಬೆಂಬಲ, ಪ್ರೋತ್ಸಾಹಗಳು ನಿರೀಕ್ಷಿಸಿದಷ್ಟು ದೊರೆಯದೆ 'ಕರ್ನಾಟಕ ಪ್ರಗತಿರಂಗ'ವು ಸಹ ಅಧಿಕಾರಕ್ಕೆ ಬರಲಿಲ್ಲ. ಇಂಥ ಸನ್ನಿವೇಶಗಳಲ್ಲಿ ಅಧಿಕಾರಕ್ಕೆ ಕಾಂಗ್ರೆಸ್ ಇಲ್ಲವೆ ಜನತಾ ಪಕ್ಷ (ಮುಂದೆ 'ಜನತಾದಳ')ಗಳು ಮಾತ್ರ ಆಡಳಿತದ ಚುಕ್ಕಾಣಿ ಹಿಡಿಯುವಂತಾದವು. ಈ ಆದಳಿತ ಪಕ್ಷಗಳ ಅಧಿಕಾರದ ಅವಧಿಗಳಲ್ಲಿ ತಮ್ಮದೇ ಆದ ಪ್ರಣಾಳಿಕೆಗಳ ಮೂಲಕ ಕೆಲವು ಕನ್ನಡಪರವಾದ ಕೆಲಸಗಳ ಮುಖೇನ ನಾಡಿನಲ್ಲಿ ಪ್ರಗತಿ ಸಾಧಿಸಲು ಕಾರಣ ಆಗಿವೆ. ಆದರೆ ಈ ಪ್ರಗತಿಗೆ ೧೯೮೦ ಹಾಗೂ ೯೦ರ ದಶಕಗಳಲ್ಲಿ ಹುಟ್ಟಿಕೊಂಡು ಕ್ರಿಯಾಶೀಲವಾದ ಕನ್ನಡ ಸಂಘಟನೆಗಳ ಚಳವಳಿಗಳೇ ಕಾರಣ. ಸಂಘಟನೆಗಳಲ್ಲಿನ ಕನ್ನಡದ ಕಾರ್ಯಕರ್ತರು ಅನೇಕ ರೀತಿಗಳಲ್ಲಿ ತಮ್ಮ ಹೆಸರನ್ನು ಕೆಡಿಸಿಕೊಂಡದ್ದು ಸಹ ಈ ಎರಡು ದಶಕಗಳಲ್ಲಿಯೇ.[೭]

'ಕನ್ನಡ ಚಳವಳಿ'ಯನ್ನು 'ಕನ್ನಡ ಚಳವಳಿಗಳ' ಹಂತಕ್ಕೆ ಕೊಂಡಯ್ದು ಈ ಅವಧಿ ಸ್ವಾರ್ಥ ರಾಜಕಾರಣದ ಪರಮಾವಧಿ ಎಂದರೂ ತಪ್ಪಲ್ಲ. ೧೯೭೦ರ ದಶಕದ ಅಂತ್ಯದವರೆವಿಗೂ ಇದ್ದ 'ಕನ್ನಡ ಚಳವಳಿ'ಯ ಸ್ವರೂಪ ಅನಂತರದಲ್ಲಿ ಬಹುಮುಖಿ ನೆಲೆಗಳನ್ನು ಕಂಡುಕೊಳ್ಳಬೇಕಾಯಿತು.[೮] ಇದಕ್ಕೆ ವಿಭಿನ್ನ ರೀತಿಯ ಚಳವಳಿಗಾರರು, ಸಂಘಟನೆಗಳು, ಸ್ವಾರ್ಥ, ಪ್ರಾತಿನಿಧ್ಯ, ಆಮಿಷ, ಅಗ್ಗದ ಪ್ರಚಾರ ಪ್ರಿಯತೆ, ಕನ್ನಡದ ಹೆಸರಿನಲ್ಲಿ ಲೂಟಿ, ದರೋಡೆ, ಹಿಂಸೆಗಳನ್ನು ಸೃಷ್ಟಿ ಮಾಡಿದ ಭ್ರಷ್ಟ ರಾಜಕಾರಣಿಗಳು, ಜಾತಿ ಮುಖಂಡರು - ಹೀಗೆ ಎಲ್ಲವೂ ಕಾರಣ ಆಗುತ್ತವೆ. ಇವೆಲ್ಲವುಗಳನ್ನು ಹೊರತುಪಡಿಸಿ ಒಂದಷ್ಟು ನಾಡು, ನುಡಿ, ಸಂಸ್ಕೃತಿ ನೆಲೆಗಳಲ್ಲಿ ಕಾರ್ಯನಿರ್ವಹಿಸಿದ ನಿಸ್ವಾರ್ಥ ಕನ್ನಡ ಚಳವಳಿಕಾರರು, ಸಂಘಟನೆಗಳು ಇಲ್ಲದಿಲ್ಲ. ಇವರಿಂದ ಆದಂಥ ರಚನಾತ್ಮಕ ಕೆಲಸಗಳು ಹಲವು.[೯]

### ೭.೩.೧ 'ಕನ್ನಡ ಶಕ್ತಿಕೇಂದ್ರ' ಮತ್ತು ಇತರೆ ಸಂಘಟನೆಗಳು

ಗೋಕಾಕ್ ಚಳವಳಿಯ ಸಂದರ್ಭದಲ್ಲಿ ಅಸ್ತಿತ್ವಕ್ಕೆ ಬಂದಿದ್ದ 'ಸಾಹಿತಿಗಳ ಕಲಾವಿದರ ಬಳಗ'ವು ಕೇವಲ ಆ ಚಳವಳಿಗೆ ಮಾತ್ರ ಸೀಮಿತ ಆಗಲಿಲ್ಲ. ಮುಂದೆ ನಾಡಿನ ಎಲ್ಲ ರೀತಿಯ ಕನ್ನಡಿಗರ ಆಶೋತ್ತರಗಳ ಕಡೆಗೂ ಗಮನ ಹರಿಸಿತ್ತು.[೧೦] ಈ ಕುರಿತು ಚರ್ಚಿಸಲು 'ಬಳಗ'ವು ೨೯-೫-೧೯೮೮ರಂದು ನಾಡಿನ ಎಲ್ಲ ಕನ್ನಡಪರವಾದ ಸಂಘ-ಸಂಸ್ಥೆಗಳನ್ನು ಬೆಂಗಳೂರಿನ ಸಭೆಗೆ ಆಹ್ವಾನಿಸಿತು. ಕನ್ನಡದ ಕಾಳಜಿ, ಚಳವಳಿಗಳ ಮಾರ್ಗದರ್ಶನ ಇತ್ಯಾದಿಗಳನ್ನು ನಡೆಸಿಕೊಂಡು ಹೋಗಲು ಒಂದು ಕೇಂದ್ರ ಸಂಸ್ಥೆಯನ್ನು ಹುಟ್ಟುಹಾಕುವುದು ಈ ಸಭೆಯ ಆಶಯ. ಈ ದಿಸೆಯಲ್ಲಿ ಅಸ್ತಿತ್ವಕ್ಕೆ ಬಂದದ್ದೇ 'ಕನ್ನಡ ಶಕ್ತಿ ಕೇಂದ್ರ'.[೧೧] ಹತ್ತು ಪ್ರಮುಖ ಆಶಯಗಳಿಗಾಗಿ ಹುಟ್ಟಿಕೊಂಡ ಈ ಕೇಂದ್ರವು ಇಂದಿಗೂ ತನ್ನ ಇತಿ-ಮಿತಿಗಳೊಳಗೆ ಕನ್ನಡ ಚಳವಳಿಗಳನ್ನು ನಡೆಸಿಕೊಂಡು ಬರುತ್ತಿದೆ. ಚಳವಳಿಗಳು ಈ ಹೊತ್ತಿಗೂ ಜೀವಂತವಾಗಿರಲು ಕನ್ನಡ ಶಕ್ತಿ ಕೇಂದ್ರ ಹಾಗೂ ಇನ್ನುಳಿದ ಸಂಘಟನೆಗಳೆ ಕಾರಣ. ಅವುಗಳಲ್ಲಿ ಕನ್ನಡ ಸಂಘರ್ಷ ಸಮಿತಿ, ಕನ್ನಡ ಸೇನೆ, ಕನ್ನಡ ರಕ್ಷಣಾ ವೇದಿಕೆ, ಕರ್ನಾಟಕ ಸಂರಕ್ಷಣಾ ಸಮಿತಿ, ಕನ್ನಡ ರಣಧೀರರ ಪಡೆ, ಪುಲಿಕೇಶಿ ಕನ್ನಡ ಸಂಘ, ಕಾವೇರಿ ಕನ್ನಡ ಬಳಗ. ಕಟ್ಟೆ ಬಳಗ, ಡಾ. ರಾಜಕುಮಾರ್ ಅಭಿಮಾನಿಗಳ ಸಂಘ ಮೊದಲಾದವು ಪ್ರಮುಖವು.[೧೨] ಇವುಗಳಲ್ಲದೆ ಸರ್ಕಾರಿ-ಅರೆ ಸರ್ಕಾರಿ ಸಂಘ-ಸಂಸ್ಥೆಗಳು, ಬ್ಯಾಂಕುಗಳ ಕನ್ನಡ ಸಂಘಗಳು, ಸಾರಿಗೆ-ಹೋಟೇಲು-ಥಿಯೇಟರು ಕಾರ್ಮಿಕರು-ಉದ್ಯಮಿಗಳು ಮೊದಲಾದ ರಂಗಗಳಲ್ಲಿ ಕನ್ನಡ ಸಂಘಟನೆಗಳು ಇವೆ.[೧೩] ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘಗಳಂಥ ಧಾರ್ಮಿಕ ಸಂಘಟನೆಗಳು ಸಹ ಕನ್ನಡ ಪರವಾದ ಚಳವಳಿಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದುಂಟು. ಅಲ್ಲದೆ ೨೬-೧-೮೯ರ ಗಣರಾಜ್ಯೋತ್ಸವದ ದಿನವನ್ನು 'ಹಿಂದಿ ಸಾಮ್ರಾಜ್ಯ ಶಾಹಿ ಕಪ್ಪು ದಿನ'ವನ್ನಾಗಿ ಆಚರಿಸಲು ಕರೆ ನೀಡಿ ಧರಣಿ ಸತ್ಯಾಗ್ರಹವನ್ನು ನಡೆಸಿದವರು ಅಖಿಲ ಕರ್ನಾಟಕ ಬ್ಯಾಂಕ್ ಕನ್ನಡ ಸಂಘಗಳ ಪರಿಷತ್ತು ಹಾಗೂ ಹಿಂದಿ ಸಾಮ್ರಾಜ್ಯಶಾಹಿ ವಿರೋಧಿ ಕ್ರಿಯಾ ಸಮಿತಿಯವರು. ಅ.ನ.ಕೃ ಅವರು ೧೯೬೦ರ ದಶಕದಲ್ಲಿ ಕನ್ನಡ ಸಂಘಗಳ ಸ್ಥಾಪನೆಗೆ ಕರೆಕೊಟ್ಟದ್ದು ಇಂದಿಗೂ ಅನೇಕ ಸಂಘಟನೆಗಳು ಸ್ಥಾಪನೆಗೊಳ್ಳಲು ಕಾರಣವಾಗುತ್ತಿದೆ. ಬೆಂಗಳೂರಿನಲ್ಲಿಯೆ ಸುಮಾರು ೫೦೦ಕ್ಕೂ ಹೆಚ್ಚಿನ ಕನ್ನಡ ಪರವಾದ ಪ್ರಮುಖ ಸಂಘಗಳು ಇರಬಹುದು ಎನ್ನಲಾಗಿದೆ.

ಅಲ್ಲದೆ ನಾಡಿನಾದ್ಯಂತ 'ಕನ್ನಡ ಶಕ್ತಿ ಕೇಂದ್ರ'ವು ಡಾ. ಎಂ. ಚಿದಾನಂದಮೂರ್ತಿ ಅವರ ನೇತೃತ್ವದಲ್ಲಿ ತನ್ನ ಶಾಖೆಗಳನ್ನು ಸ್ಥಾಪಿಸಿರುವುದು ಗಮನಾರ್ಹ.

'ಕನ್ನಡ ಶಕ್ತಿ ಕೇಂದ್ರ'ವು ಇತರೆ ಕನ್ನಡ ಪರವಾದ ಸಂಘಟನೆಗಳನ್ನು, ಕಾರ್ಯಕರ್ತರನ್ನು ಸೇರಿಸಿಕೊಂಡಂತೆ ಡಾ. ಸರೋಜಿನಿ ಮಹಿಷಿ ವರದಿ[೧೪]ಯ ಅನುಷ್ಠಾನಕ್ಕೆ ಒತ್ತಾಯಿಸಿ ೧೯೮೮ರ ನವೆಂಬರ್ ಒಂದರಂದು (ರಾಜ್ಯೋತ್ಸವದ ದಿನ) 'ಎಚ್ಚರಿಕೆಯ ದಿನ'ವನ್ನಾಗಿ ಆಚರಿಸಿತು. ಕೇಂದ್ರ ಮತ್ತು ರಾಜ್ಯ ಸರ್ಕಾರಿ ಕಛೇರಿ-ಕಾರ್ಖಾನೆಗಳಲ್ಲಿ ಹಾಗೂ ಖಾಸಗಿ ರಂಗಗಳಲ್ಲಿ ಕನ್ನಡಿಗರಿಗೆ ಉದ್ಯೋಗವಕಾಶಗಳನ್ನು ಕುರಿತ ಈ ವರದಿಯ ಅನುಷ್ಠಾನಕ್ಕಾಗಿ ತೀವ್ರವಾದ ಪ್ರತಿಭಟನೆಗಳು ಆದವು. ಇಂಥ ಪ್ರತಿಭಟನೆಗಳಿಂದ ಒಡಿದು ಈ ಹೊತ್ತಿನ 'ಹುಬ್ಬಳ್ಳಿ-ನೈರುತ್ಯ ರೈಲ್ವೆ ವಲಯದ ಕೇಂದ್ರ'[೧೫]ಕ್ಕಾಗಿ ಒತ್ತಾಯಿಸುವ ಚಳವಳಿಗಳವರೆಗೂ ಶಕ್ತಿ ಕೇಂದ್ರವು ಅನೇಕ ಕನ್ನಡಪರವಾದ ಕೆಲಸಗಳನ್ನು ಸಾಕಾರಗೊಳಿಸಿದೆ. ಈ ನಿಟ್ಟಿನಲ್ಲಿ ನಡೆದ ಕೆಲವು ಚಳವಳಿಗಳನ್ನು ಪರಿಗಣಿಸಬಹುದು. ಅವು -

೧. ಕನ್ನಡದಲ್ಲಿ ರಾಜ್ಯ ಲೋಕಸೇವಾ ಆಯೋಗದ ಪರೀಕ್ಷೆಗಳನ್ನು ನಡೆಸಲು ಒತ್ತಾಯಿಸಿ ಧರಣಿ.
೨. ಬೆಂಗಳೂರು ದೂರದರ್ಶನದ ಕನ್ನಡೀಕರಣಕ್ಕಾಗಿ ಚಳವಳಿಗಳು (೧೯೮೮).
೩. ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆಗಾಗಿ ಒತ್ತಾಯ, ಒಡೆಯರ್ ಸಮಿತಿ (೧೯೮೫), ವರದಿ ಮೇರೆಗೆ ಸ್ಥಾಪನೆ (೧೯೯೧).
೪. ಕಾವೇರಿ ಜಲವಿವಾದದ ಚಳವಳಿ, ಗಲಭೆ ವಿಚಾರಣೆಗೆ ಒತ್ತಾಯ (೧೯೯೧).
೫. ಉರ್ದು ವಾರ್ತಾ ಪ್ರಸಾರ ತಡೆಗೆ ಚಳವಳಿ (೧೯೯೪).
೬. ಅನ್ಯಭಾಷಾ ಪ್ರತಿಮೆಗಳ ಸ್ಥಾಪನೆಗೆ (ತಿರುವಳ್ಳುವರ್ - ೧೯೯೧, ಶಿವಾಜಿ - ೧೯೯೪ ಇತ್ಯಾದಿ) ತಡೆ. ನಗರದಲ್ಲಿ ಕನ್ನಡ ಸಾಹಿತ್ಯ ದಿಗ್ಗಜಗಳ ಪ್ರತಿಮೆಗಳನ್ನು ಸ್ಥಾಪಿಸಲು ಒತ್ತಾಯ.
೭. 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ದ ಸ್ಥಾಪನೆಗೆ ಒತ್ತಾಯ.
೮. 'ಕನ್ನಡ ಪುಸ್ತಕ ಪ್ರಾಧಿಕಾರ'ಕ್ಕಾಗಿ ಒತ್ತಾಯ.
೯. ಪ್ರಾಥಮಿಕ ಶಿಕ್ಷಣ, ಸರ್ಕಾರದ ಆಡಳಿತ ಭಾಷೆಗಳನ್ನು ಕನ್ನಡವನ್ನಾಗಿಸಲು ಒತ್ತಾಯಗಳು.
೧೦. ಬೆಳಗಾವಿಯಲ್ಲಿ ತಾಂತ್ರಿಕ (ಸರ್. ಎಂ. ವಿಶ್ವೇಶ್ವರಯ್ಯ) ವಿಶ್ವವಿದ್ಯಾಲಯ ಸ್ಥಾಪನೆ.

ಮೊದಲಾದ ಕನ್ನಡ ಪರವಾದ ಸಾಧನೆಗಳ ಜೊತೆಗೆ ಈ ಹೊತ್ತಿಗೂ ಜ್ವಲಂತವಾಗಿ ಕಾಡುತ್ತಿರುವ ಕೆ. ಜಿ. ಎಫ್ ನಲ್ಲಿ ತಮಿಳರ ದೌರ್ಜನ್ಯ, ಬೆಳಗಾವಿಯ 'ಎಂ.ಇ.ಎಸ್' (ಮಹಾರಾಷ್ಟ್ರ ಏಕೀಕರಣ ಸಮಿತಿ) ಪಕ್ಷದವರ ಕನ್ನಡ ವಿರೋಧಿ ಕಾರ್ಯಕ್ರಮಗಳು, ಹಂಪಿ-ಗೋಕರ್ಣ ಮೊದಲಾದೆಡೆಗಳಲ್ಲಿನ ಹಿಪ್ಪಿಗಳ ಸ್ವೇಚ್ಛಾಚಾರ, ಬೀದರ್‌ನಲ್ಲಿನ ಸಿಖ್ಖರಿಂದ ಕನ್ನಡಿಗರ ಮೇಲೆ ಆಗುತ್ತಿರುವ ಅತ್ಯಾಚಾರಗಳು, ಕನ್ನಡ ನಾಮಫಲಕಗಳನ್ನು ವಿರೋಧಿಸುವವರ ಧೋರಣೆಗಳು, ಸಂಘ-ಸಂಸ್ಥೆಗಳಲ್ಲಿ ಕನ್ನಡದಲ್ಲಿ ವ್ಯವಹರಿಸದಿರುವ ಹಠಮಾರಿತನ, ಕೇಂದ್ರ ಸರ್ಕಾರದ ಅಂಚೆ-ತಂತಿ, ರೈಲ್ವೆ, ಆಡಿಟರ್ ಜನರಲ್‌ರ ಕಛೇರಿ ಮೊದಲಾದ ಕಡೆಗಳಲ್ಲಿ ಕನ್ನಡೇತರರ ನೇಮಕ, ವಲಸಿಗರ ನಿರಂತರತೆ, ಬೆಂಗಳೂರು

ಹಾಗೂ ಇತರೆಡೆಗಳಲ್ಲಿ ಕರ್ನಾಟಕದ ಸಂಸ್ಕೃತಿ ವಿಚಾರಗಳಿಗೆ, ಸೌಂದರ್ಯಕ್ಕೆ, ಪರಿಸರಕ್ಕೆ ಹಾನಿಕಾರಕವಾದ ನಿರ್ಣಯಗಳು - ಹೀಗೆ ಅನೇಕ ಸಮಸ್ಯೆಗಳನ್ನು ಕನ್ನಡ ಚಳವಳಿಗಾರರು, ಕಾರ್ಯಕರ್ತರು, ಸಾಹಿತಿ-ಕಲಾವಿದರು, ಸಂಘಟನೆಗಳು ಪ್ರತಿಭಟಿಸುತ್ತಲೇ ಇದ್ದಾರೆ.[೧೬] ಆಯಾ ಸಂದರ್ಭದ ಪ್ರತಿರೋಧಗಳಿಗೆ ಪರಿಹಾರಗಳು ಕಂಡುಬರುತ್ತವೆಯಾದರೂ ಮತ್ತೆ ಮತ್ತೆ ಇಂಥ ಸಮಸ್ಯೆಗಳು ಮರುಕಳಿಸುತ್ತಲೆ ಇವೆ. ಇವುಗಳ ಜೊತೆಗೆ 'ಉತ್ತರ ಕರ್ನಾಟಕ' ಹಾಗೂ 'ಕೊಡಗು ಪ್ರತ್ಯೇಕತೆ'ಯ ಕೂಗುಗಳು ಕೇಳಿಬರುತ್ತಿರುವುದು ಕನ್ನಡ ಚಳವಳಿಗಾರರಿಗೆ ಆತಂಕಗಳನ್ನು ಹುಟ್ಟಿಸಿವೆ. ಕನ್ನಡಿಗರು ಇದೀಗ ಏಕೀಕರಣಗೊಂಡು ಪ್ರಗತಿಯನ್ನು ಕಾಣುತ್ತಿರುವ ಸನ್ನಿವೇಶದಲ್ಲಿ ಜಾತಿ, ಪ್ರದೇಶ, ರಾಜಕಾರಣದ ಸ್ವಾರ್ಥ, ಪ್ರಾತಿನಿಧ್ಯದ ಆಮಿಷಗಳ ನೆಲೆಗಳಲ್ಲಿ ಆತಂಕಗಳನ್ನು ಹುಟ್ಟಿಸುತ್ತಿರುವವರ ವಿರುದ್ಧ ಸಂಘಟನೆಗಳ ಮೂಲಕ ವಿರೋಧಿಸುತ್ತಿದ್ದಾರೆ.[೧೭] ಕೊಡಗಿನಲ್ಲಿನ ಬಂಡವಾಳ ಶಾಹಿಗಳು, ಅದರಲ್ಲೂ ಎನ್.ಯು.ನಾಚಪ್ಪನವರ ಅರ್ಥವಿಲ್ಲದ ಪ್ರಲಾಪಗಳೊಂದಿಗೆ ಹುಟ್ಟಿಕೊಂಡಿರುವ 'ಕೊಡಗು ರಾಜ್ಯ ಮುಕ್ತಿ ಮೋರ್ಚಾ' (ಕೆ. ಆರ್. ಎಂ. ಎಂ.) ಎಂಬ ಸಂಘಟನೆಯು ಪ್ರತ್ಯೇಕತೆಯ ಧ್ವನಿಗೆ ಬೆಂಬಲಿಸುತ್ತಿದೆ. ಈ ಸಂಘಟನೆಗೆ ವಿರುದ್ಧವಾಗಿ 'ಕೊಡಗು ಪ್ರಜಾ ವೇದಿಕೆ' ಹಾಗೂ ಇತರೆ ಕನ್ನಡದ ಸಂಘಟನೆಗಳು ಸರಿಯಾದ ಉತ್ತರವನ್ನು ನೀಡುತ್ತಿವೆ.[೧೮] ಕಳೆದ ಎರಡು ದಶಕಗಳಲ್ಲಿ ಹುಟ್ಟಿಕೊಂಡಿರುವ ಇಂಥ ಸಮಸ್ಯೆಗಳಿಗೆ ಕನ್ನಡಿಗರು ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಿರುವುದು ಚಳವಳಿಯು ಭಿನ್ನವಾದ ರೂಪಗಳಲ್ಲಿ ಜೀವಂತವಾಗಿದೆ ಎಂಬುದನ್ನು ಸಾಬೀತು ಮಾಡುತ್ತಿದೆ.

### ೭.೪.೧ 'ಕನ್ನಡ ಚಳವಳಿ'ಗಳು 'ಕನ್ನಡ ಹೋರಾಟ'ಗಳಾದ ಬಗೆ

ಕನ್ನಡ ಚಳವಳಿಗಳು 'ಹೋರಾಟ'ದ ನೆಲೆಗಳನ್ನು ಕಂಡದ್ದು ೧೯೮೦ರ ದಶಕದಿಂದೀಚೆಗೆ. ಇದಕ್ಕೆ ಕಾರಣ, ಕರ್ನಾಟಕದಲ್ಲೂ ಕೋಮುವಾದಿ ಬೀಜಗಳನ್ನು ಬಿತ್ತಿದ ರಾಜಕೀಯ ಪಕ್ಷಗಳು ಹಾಗೂ ಅವುಗಳ ಹಿಂಸಾತ್ಮಕ ಮನೋಧರ್ಮ.[೧೯] ರಾಜಕಾರಣದ ಆಸೆ-ಆಮಿಷಗಳೇ ಪ್ರಧಾನವಾಗಿ ವ್ಯಕ್ತವಾಗುವ ಸಾಮ್ರಾಜ್ಯಶಾಹಿ, ಲೂಟಿಕೋರತನ, ಭ್ರಷ್ಟಚಾರದ ಮನೋವೃತ್ತಿಯ ರಾಜಕಾರಣಿಗಳು ಜನಸಾಮಾನ್ಯರನ್ನು ಶೋಷಿಸಲು 'ಕನ್ನಡ ಚಳವಳಿ'ಗಳಿಗೆ 'ಹಿಂಸಾತ್ಮಕ' ಸ್ವರೂಪವನ್ನು ನೀಡಲು ಉತ್ತೇಜಿಸಿದರು. ಇದರಿಂದ ಕನ್ನಡಿಗರ ಕ್ಷಣಿಕ ಭಾವೋದ್ವೇಗಗಳು ಜಾತಿ, ಧರ್ಮ, ಕೋಮು, ಭಾಷೆ, ಜನಾಂಗ, ಪ್ರದೇಶ ಮೊದಲಾದ ಸೂಕ್ಷ್ಮಸಂವೇದನೆಗಳಿಂದ ಬಂಡವಾಳವಾಗುವಂತೆ ಆಯಿತು. ಇವುಗಳನ್ನು ಬಳಸಿಕೊಂಡ ಸಮಯಸಾಧಕರು ಉರ್ದು ಗಲಾಟೆ, ಕಾವೇರಿ ಜಲವಿವಾದದ ಸಂದರ್ಭಗಳನ್ನು ಹಿಂಸಾಕೃತ್ಯಗಳಿಗಾಗಿ ಬಳಸಿಕೊಂಡದ್ದುಂಟು. ಕಾವೇರಿ ಜಲವಿವಾದವನ್ನು ತಮಿಳು ಹಾಗೂ ಕನ್ನಡ ಭಾಷಿಕರ ನಡುವೆ ನಡೆದ ಭಾಷಿಕ ದ್ವೇಷ, ಹೋರಾಟವನ್ನಾಗಿ ಮಾಡಲಾಯಿತು. ಈ ಸಂದರ್ಭದಲ್ಲಿ 'ಕನ್ನಡ'ದ ಹೆಸರಿನಲ್ಲಿ ಕಿಡಿಗೇಡಿಗಳು ಅಮಾಯಕ ತಮಿಳರ ಪ್ರಾಣಹಾನಿ, ಆಸ್ತಿ-ಪಾಸ್ತಿಗಳ ನಷ್ಟವನ್ನು ಉಂಟು ಮಾಡಿದರು.[೨೦] ಅಂತೆಯೇ ಉರ್ದುವಾರ್ತೆಗಳನ್ನು ವಿರೋಧಿಸುವ ನೆಪದಲ್ಲಿ ಹಿಂದು-ಮುಸ್ಲಿಮರ ನಡುವೆ ಕೋಮುಗಲಭೆಯನ್ನೇ ಸೃಷ್ಟಿಸಲಾಯಿತು.[೨೧] ಒಟ್ಟಿನಲ್ಲಿ ಈ ಎರಡು ಸಂದರ್ಭಗಳಲ್ಲಿ ನೆಪವಾಗಿ ಉಳಿದದ್ದು 'ಕನ್ನಡ' ಭಾಷೆ. ಭಾಷೆಯ ಹೆಸರಿನಲ್ಲಿ ಅಮಾಯಕ ಜನತೆ ಪ್ರಾಣಗಳನ್ನೇ

ಕಳೆದುಕೊಂಡರು. ಈ ಬಗೆಗೆ 'ಕರ್ನಾಟಕ ವಿಮೋಚನಾ ರಂಗ' ಹಾಗೂ 'ಪ್ರಜಾತಾಂತ್ರಿಕ ಜನರ ವೇದಿಕೆ'ಗಳು ಸತ್ಯಶೋಧನಾ ವರದಿಗಳನ್ನೇ ಪ್ರಕಟಿಸಿವೆ.[೨೨]

ಕೇಂದ್ರ ಸರ್ಕಾರದ ಸಾಮ್ರಾಜ್ಯಶಾಹಿ ಧೋರಣೆಗಳಿಗೆ ಗುರಿಯಾದ ರಾಜ್ಯಗಳು, ತಮ್ಮ ಸಂಪನ್ಮೂಲಗಳನ್ನು ಬರಿದು ಮಾಡಿಕೊಂಡ ಪ್ರಸಂಗಗಳು ಈ ಎರಡು ದಶಕಗಳಲ್ಲಿ (೧೯೮೦-೯೯) ನಡೆದಿದೆ. ಕರ್ನಾಟಕದ ಸಂದರ್ಭದಲ್ಲೂ ಈ ರೀತಿಯ ಆಕ್ರಮಣಕಾರಿ ಪ್ರವೃತ್ತಿಗಳು ನಡೆದಿವೆ ಹಾಗೂ ಈಗಲೂ ನಡೆಯುತ್ತಿವೆ. ಇಂಥ ಪ್ರವೃತ್ತಿಗಳನ್ನು ಹತ್ತಿಕ್ಕಲು ಕನ್ನಡಿಗರ ಹೋರಾಟದ ಪ್ರತಿಭಟನೆಗಳು ವ್ಯಕ್ತವಾಗದೆ ಇಲ್ಲ. ಈ ಹೋರಾಟದ ಪ್ರತಿಭಟನೆಗಳಿಗೆ ಕನ್ನಡ-ಕರ್ನಾಟಕಗಳ ಸ್ವಾಭಿಮಾನವೆ ಆಧಾರ. ಆದರೆ ಸ್ವಾಭಿಮಾನ-ಸ್ವಾವಲಂಬನೆಯ ವಿಚಾರಗಳ ಜೊತೆಗೆ ಪ್ರಾಯೋಗಿಕವಾದ ಕಾರ್ಯಕ್ರಮಗಳು, ಚಟುವಟಿಕೆಗಳು ಪ್ರಧಾನ ಆಗುತ್ತವೆ. ಈ ದಿಸೆಯಲ್ಲಿ ನಡೆದ ಕನ್ನಡ ಹೋರಾಟಗಳಿಗೆ 'ಕರ್ನಾಟಕ ವಿಮೋಚನಾ ರಂಗ', 'ಪ್ರಜಾತಾಂತ್ರಿಕ ಜನರ ವೇದಿಕೆ' ಮೊದಲಾದವುಗಳ ಮುಂದಾಳತ್ವವು ಮುಖ್ಯವಾದುದು. ಈ ರೀತಿಯ ಸಂಘಟನೆಗಳಿಂದ ಬೆಂಗಳೂರಿನಲ್ಲಿ ನಿರ್ಮಿಸಲು ಹೊರಟಿದ್ದ, ಜಪಾನ್ ಕೈಗಾರಿಕಾ ವಸಾಹತು ವಿರೋಧಿ ಹೋರಾಟ, ಸಿಂಗಪುರ್ ಟೌನ್‌ಷಿಪ್ ವಿರುದ್ಧ ಪ್ರತಿಭಟನೆ, ದೇಶದ ಸಾರ್ವಭೌಮತ್ವವನ್ನೇ ಒತ್ತೆಯಿಡಲು ಹೊರಟ ಗ್ಯಾಟ್ ಒಪ್ಪಂದಗಳಿಗೆ ವಿರೋಧ, ಅಭಯಾರಣ್ಯದ ವಿನಾಶವನ್ನು ಮಾಡಲು ಹೊರಟ ಗಂಗಡಿಕಲ್ಲು ಅದಿರು ಯೋಜನೆ ವಿರುದ್ಧ 'ತುಂಗಾ ಮೂಲ ಉಳಿಸಿ' ಚಳವಳಿ, ಚಿಕ್ಕಮಗಳೂರು, ಚಿತ್ರದುರ್ಗ, ಶಿವಮೊಗ್ಗ, ಬೀದರ್ ಮೊದಲಾದ ಜಿಲ್ಲೆಗಳಲ್ಲಿ ಪರಿಸರ ಮಾಲಿನ್ಯ ಉಂಟು ಮಾಡಲು ಮುಂದಾದ ರಾಸಾಯನಿಕ ಕೈಗಾರಿಕೆಗಳ ವಿರುದ್ಧ ನಡೆದ ಚಳವಳಿಗಳು ಪ್ರಭಾವಕಾರಿಯಾಗಿ ವ್ಯಕ್ತಗೊಂಡವು.[೨೩] ಈ ಜನಪರ ಹೋರಾಟಗಳಲ್ಲಿ ಸ್ಥಳೀಯ ಜನತೆ, ರೈತರು, ಪರಿಸರ ಪ್ರೇಮಿಗಳು, ಆ್ಯಕ್ಟಿವಿಸ್ಟ್‌ಗಳು ತೋರಿದ ಪ್ರತಿಕ್ರಿಯೆ ಗಮನಾರ್ಹವಾದುದು. ಇವರ ಜೊತೆಗೆ ಕೆ. ಪಿ. ಸುಬ್ಬಣ್ಣ, ಬಂಜಗೆರೆ ಜಯಪ್ರಕಾಶ್, ವಿಠಲ್ ಹೆಗಡೆ, ಉದಯ ಧರ್ಮಸ್ಥಳ, ರಾ. ಸೋಮನಾಥ್, ಅಶೋಕ್ ಕಿಣಿ, ಮೊದಲಾದವರ ಚಟುವಟಿಕೆಗಳು ಮುಖ್ಯವಾದವು.[೨೪]

ಕನ್ನಡ ಚಳವಳಿಗಳ ಚರಿತ್ರೆಯಲ್ಲಿ ಕಳೆದ ಎರಡು ದಶಕಗಳನ್ನು ಪರಿಶೀಲಿಸಿದರೆ ರಾಜಕಾರಣದ ಆಮಿಷ, ಕೀಳು ಮಟ್ಟದ ಪ್ರಚಾರ ಪ್ರಿಯತೆ, ಅಸಂಖ್ಯ ಘೋಷಿತ ನಾಯಕರು, ಅಸಂಖ್ಯ ಘೋಷಿತ ಸಂಘಟನೆಗಳು ಹಾಗೂ ಸಮಯಸಾಧಕತನಗಳಿಂದ ಪ್ರಾತಿನಿಧ್ಯ ಗಳಿಸುವ ಸನ್ನಾಹಗಳು ಚಳವಳಿಯನ್ನು ಒಡೆದು ಛಿದ್ರಗೊಳಿಸುತ್ತ ಬಂದಿರುವುದು ಸ್ಪಷ್ಟ ಆಗುತ್ತದೆ. ಈ ತರದ ಪ್ರಕ್ರಿಯೆಗಳು ಕನ್ನಡಿಗರನ್ನು ಮತ್ತಷ್ಟು ಅಭಿಮಾನ ಶೂನ್ಯರನ್ನಾಗಿ ಮಾಡಿವೆ. ಕನ್ನಡಿಗರು ಭಾಷಾಂಧಾಭಿಮಾನಿಗಳು, ಆಕ್ರಮಣಶೀಲರೂ ಆಗುವ ಜರೂರು ಇಲ್ಲ. ಆದರೆ ಸಾತ್ವಿಕವಾದ ಕನ್ನಡದ ಕಾಳಜಿಯನ್ನಾದರೂ ಬೆಳಸಿಕೊಳ್ಳುವುದು ಅನಿವಾರ್ಯ. ಇಲ್ಲವಾದಲ್ಲಿ 'ಕನ್ನಡ'ಕ್ಕೆ ವಿರುದ್ಧವಾದ ಅನೇಕ ಸಮಸ್ಯೆಗಳು ಹೆಚ್ಚಾಗುವುದು ಸಹಜ. ಈ ಹೊತ್ತಿನವರೆವಿಗೂ ಕನ್ನಡ-ಕನ್ನಡಿಗ-ಕರ್ನಾಟಕ ಪರವಾದ ರಾಜಕೀಯ ಪಕ್ಷವೊಂದನ್ನು ರಚಿಸಿ ಅಧಿಕಾರಕ್ಕೆ ತರಲಾಗದೆ ಹೋದದ್ದು ನಮ್ಮ ಸೋಲಿನ ಸಂಕೇತ. ಕನ್ನಡ ರಾಜಕಾರಣಿಗಳು ಕನ್ನಡೇತರ ರಾಜಕೀಯ ಪಕ್ಷಗಳೊಂದಿಗೆ (ತಮಿಳು ನಾಡಿನ ಡಿ.ಎಂ.ಕೆ

ಅಣ್ಣಾ ಡಿ.ಎಂ.ಕೆ ಮೊದಲಾದ ಪಕ್ಷಗಳೊಂದಿಗೆ) ಹೊಂದಾಣಿಕೆ ಮಾಡಿಕೊಳ್ಳುತ್ತಿರುವುದು ಸ್ವಾರ್ಥ, ಸಂಕುಚಿತ ರಾಜಕಾರಣದ ಉದಾಹರಣೆಗಳಾಗಿ ದಾಖಲು ಆಗುತ್ತಿವೆ. ಅಲ್ಲದೆ ಕನ್ನಡಿಗರ ನಿರಭಿಮಾನಿ ಧೋರಣೆಗಳಿಂದಲೇ[೨೫] ಈ ಹೊತ್ತಿಗೂ ಶಿಕ್ಷಣ ರಂಗದಲ್ಲಿ ಕಡ್ಡಾಯವಾಗಿ ಕನ್ನಡ ಭಾಷೆಯನ್ನು ಕಲಿಸಲು ಸಾಧ್ಯ ಆಗುತ್ತಿಲ್ಲ. ಅಂತೆಯೇ ಮಹಿಷಿ ವರದಿಯು ಪೂರ್ಣ ಪ್ರಮಾಣದಲ್ಲಿ ಜಾರಿಗೆ ಬಾರದಿರುವುದು, ಆಡಳಿತ ಭಾಷೆ ಕನ್ನಡ ಆಗದಿರುವುದು - ಹೀಗೆ ಅನೇಕ ವಿಚಾರಗಳು ಹಾಗೆಯೆ ನನೆಗುದಿಗೆ ಬಿದ್ದಿವೆ. ಇವುಗಳ ಜಾರಿಗೆ ಅಥವಾ ಸಾಕಾರತೆಗೆ ಬೇಕಿರುವುದು ಭಾವೋದ್ವೇಗ, ಅತಿರೇಕದ ಕನ್ನಡ ಚಳವಳಿಗಳಲ್ಲ. ಬದಲಾಗಿ ಸಮಚಿತ್ತದ ಸಹಜ ಕನ್ನಡ ಪ್ರೀತಿ ಹಾಗೂ ಮುಂದಾಲೋಚಿತ ಕಾರ್ಯಕ್ರಮಗಳು. ಆಗ ಮಾತ್ರ ಭಾವಾವೇಶದ ಕರ್ನಾಟಕಕ್ಕಿಂತ, ಸ್ವಾಭಿಮಾನಿ, ಪ್ರಗತಿದಾಯಕ ಕರ್ನಾಟಕವನ್ನು ನೋಡಲು ಸಾಧ್ಯ ಅನ್ನಿಸುತ್ತದೆ,

## ಟಿಪ್ಪಣಿಗಳು

೧. 'ಕರ್ನಾಟಕ ಪ್ರಗತಿರಂಗ' ಪಕ್ಷದ ಪ್ರಣಾಳಿಕೆಯ 'ಮೂರನೆಯ ಶಕ್ತಿ' ಎಂಬ ಶೀರ್ಷಿಕೆಯಡಿಯಲ್ಲಿನ ಉಲ್ಲೇಖ, (ಬೆಂ. ೧೯೮೮).

೨. 'ಕನ್ನಡ ದೇಶ' ಪಕ್ಷದ ಪ್ರಣಾಳಿಕೆಯ ಬೆನ್ನುಡಿಯಲ್ಲಿನ 'ರಾಷ್ಟ್ರಕವಿ ಕುವೆಂಪು ಸಂದೇಶ'ದಿಂದ, (ಬೆಂ. ೧೯೮೭).

೩. ಹಳದಿ-ಕೆಂಪು ಬಣ್ಣದ ಬಾವುಟದ ಮಧ್ಯೆ ಹಸಿರು ಬಣ್ಣದ ಕರ್ನಾಟಕದ ನಕ್ಷೆ ಇದೆ, (ಬೆಂ. ೧೯೮೭).

೪. 'ಕರ್ನಾಟಕ ಪ್ರಗತಿರಂಗ' ಪಕ್ಷದ ಪ್ರಣಾಲಿಕೆಯಿಂದ.

೫. ಇಲ್ಲಿ 'ಪತ್ರಿಕೆ' ಎಂಬುದು 'ಲಂಕೇಶ್ ಪತ್ರಿಕೆ'ಯನ್ನು ಉಲ್ಲೇಖಿಸುತ್ತದೆ. ಇದರ ಸಂಪಾದಕ ಪ್ರೊ. ಪಿ. ಲಂಕೇಶ್ ಅವರು.

೬. 'ಕರ್ನಾಟಕ ಪ್ರಗತಿರಂಗ' ಪಕ್ಷದ ಪ್ರಣಾಲಿಕೆಯಲ್ಲಿ ಈ ಪಕ್ಷದ ಬಾವುಟವನ್ನು 'ಅರಳುತ್ತಿರುವ ಗುಲಾಬಿ'ಯೆಂದು ಸೂಚಿಸಲಾಗಿದೆ.

೭. ಕೆಲವು ಕನ್ನಡ ಸಂಘಗಳು ಹಾಗೂ ಕನ್ನಡ ಪಡೆಗಳು 'ನಾಡು-ನುಡಿ', 'ರಾಜ್ಯೋತ್ಸವ'ದ ಹೆಸರಿನಲ್ಲಿ ಕನ್ನಡೇತರರರನ್ನು ಬಲವಂತಪಡಿಸಿದ್ದು ಇದೆ. ವ್ಯಾಪಾರ-ವಾಣಿಜ್ಯೋದಮಿಗಳಿಂದ ವಂತಿಗೆಗಳನ್ನು ವಸೂಲಿ ಮಾಡಿದ ಪ್ರಕರಣಗಳಿವೆ. ಇದರಿಂದ ತಮ್ಮ ಹೆಸರನ್ನಷ್ಟೇ ಅಲ್ಲದೆ 'ಕನ್ನಡ'ಕ್ಕೂ ಮಸಿ ಬಳಿದರು.

೮. ೧೯೮೦ರ ದಶಕದ ನಂತರ ಕನ್ನಡ ಚಳವಳಿಗಳು ಅಸಂಖ್ಯ ರೀತಿಯಲ್ಲಿ ಕಾಣಸಿಗುತ್ತವೆ. ಅ.ನ.ಕೃ, ರಾಮಮೂರ್ತಿ ಮೊದಲಾದವರು ಹುಟ್ಟು ಹಾಕಿದ ಏಕ ರೀತಿಯ 'ಕನ್ನಡ ಚಳವಳಿ' ಪರಿಕಲ್ಪನೆ ಚಾಲ್ತಿಯಲ್ಲಿ ಇರಲಿಲ್ಲ.

೯. ಚಂದ್ರಶೇಖರ್, ರಾ. ನಂ., ಕನ್ನಡ ಶಕ್ತಿ, (ಬೆಂ.೧೯೯೮), ಪು-೫. ಅಲ್ಲದೆ ಅನೇಕ ಸಂಘಟನೆಗಳು ತಮ್ಮ ಪರಿಮಿತಿಗಳಲ್ಲಿ ಕನ್ನಡದ ಪ್ರತಿಯೊಂದು ಸಮಸ್ಯೆಯನ್ನು ಎದುರಿಸುವಲ್ಲಿ ಪ್ರತಿಕ್ರಿಯಿಸುತ್ತಿರುವುದನ್ನು ಈ ಹೊತ್ತಿನ ದಿನ ಪತ್ರಿಕೆಗಳಲ್ಲಿ ನೋಡುತ್ತಿರುತ್ತೇವೆ.

೧೦. ಚಂದ್ರಶೇಖರ್, ರಾ. ನಂ., ಕನ್ನಡ ಚಳವಳಿ-ಸಾಹಿತಿಗಳ ಕಲಾವಿದರ ಬಳಗ, (ಬೆಂ. ೧೯೯೯).

೧೧. ಚಂದ್ರಶೇಖರ್, ರಾ. ನಂ., ಕನ್ನಡ ಶಕ್ತಿ, (ಬೆಂ, ೧೯೯೮), ಪು-೫.

೧೨. ಪ್ರಾಸ್ತಾವಿಕವಾಗಿ ಕೆಲವು ಸಂಘಟನೆಗಳನ್ನು ಮಾತ್ರ ಹೆಸರಿಸಲಾಗಿದೆ. ಇದು ನಾಡಿನ ಎಲ್ಲ ಕನ್ನಡಪರ ಸಂಘ-ಸಂಸ್ಥೆಗಳ ಪಟ್ಟಿ ಅಲ್ಲ.

೧೩. ನಾಡಿನಾದ್ಯಂತ ಅನೇಕ ಸಂಘಟನೆಗಳಿವೆ. ಈ ಅಧ್ಯಯನವನ್ನು ಕೈಗೊಳ್ಳುವಾಗ ಕೆಲವು ಸಂಘಟನೆಗಳು, ವ್ಯಕ್ತಿಗಳು ಮಾಹಿತಿಗಳನ್ನು ನೀಡಿದ್ದಾರೆ. ಅನುಬಂಧವನ್ನು ನೋಡಿ.

೧೪. 'ಸಾಹಿತಿಗಳ ಕಲಾವಿದರ ಬಳಗ'ದ ಪ್ರಕಟಣೆ, 'ಡಾ. ಸರೋಜಿನಿ ಮಹಿಷಿ ಸಮಿತಿ ಶಿಫಾರಸುಗಳ ಸಾರಾಂಶ'ವನ್ನು ನೋಡಿ, (ಬೆಂ. ೧೯೮೯).

೧೫. ಚಿದಾನಂದಮೂರ್ತಿ, ಎಂ., ಹುಬ್ಬಳ್ಳಿ - ನೈಋತ್ಯ ರೈಲ್ವೆವಲಯ ಕೇಂದ್ರವಾಗಿ, (ಬೆಂ, ೧೯೯೯). ಹೆಚ್ಚಿನ ಮಾಹಿತಿಗಾಗಿ 'ಕನ್ನಡ ಶಕ್ತಿ ಕೇಂದ್ರ'ದ ಈ ಪ್ರಕಟಣೆಯನ್ನು ಗಮನಿಸಿ.

೧೬. ಚಂದ್ರಶೇಖರ್. ಪಾ. ನಂ., ಕನ್ನಡ ಹೋರಾಟಗಳು - ಒಂದು ನೋಟ, (ಬೆಂ, ೧೯೯೯).

೧೭. ಇತ್ತೀಚೆಗೆ ಉತ್ತರ ಕರ್ನಾಟಕದವರಿಗಾಗಿ ಪ್ರತ್ಯೇಕ ಹೈಕೋರ್ಟಿನ ಪೀಠವೊಂದನ್ನು ಸ್ಥಾಪಿಸಲು ಒತ್ತಾಯ, ಪ್ರತಿಭಟನೆಗಳು ನಡೆದವು. ಇಂಥ ರಚನಾತ್ಮಕ ಒತ್ತಾಯಗಳಿಗೆ ಎಲ್ಲ ಕನ್ನಡಿಗರ ಬೆಂಬಲವೂ ದೊರೆಯುತ್ತದೆ. ಆದರೆ ಪ್ರತ್ಯೇಕ ರಾಜ್ಯದಂಥ ಬೇಡಿಕೆಗೆ ಅಲ್ಲ.

೧೮. ತಂಬಂಡ ವಿಜಯ ಪೂಣಚ್ಚ, ಪ್ರತ್ಯೇಕ ಕೊಡಗು ರಾಜ್ಯ; ಮೂಲ ನಿವಾಸಿಗಳು ಮತ್ತು ವಲಸೆಗಾರರು, (ಹಂಪಿ, ೧೯೯೮).

೧೯. ಪ್ರಜಾತಾಂತ್ರಿಕ ಜನರ ವೇದಿಕೆ (ಪಿ. ಡಿ. ಎಫ್), ಕೋಮು ವಾದಕ್ಕೊಂದು 'ಮಾಧ್ಯಮ'......, (ಬೆಂ, ೧೯೯೪).

೨೦. ಕರ್ನಾಟಕ ವಿಮೋಚನಾ ರಂಗ (KVR)., ಕಾವೇರಿ ಕಿಚ್ಚು, (ಬೆಂ, ೧೯೯೨).

೨೧. ಪ್ರಜಾತಾಂತ್ರಿಕ ಜನರ ವೇದಿಕೆ, ಮೇಲಿನದೆ, ೧೯೯೪ರ ಅಕ್ಟೋಬರ್‌ನಲ್ಲಿ ನಡೆದ ಉರ್ದು ವಿರೋಧಿ ಕೋಮುಗಲಭೆಗಳ ಬಗ್ಗೆ ಒಂದು ಸತ್ಯಶೋಧಕ ವರದಿಯನ್ನು ಈ ಕೃತಿ ನೀಡಿದೆ.

೨೨. 'ಕರ್ನಾಟಕ ವಿಮೋಚನಾ ರಂಗ'ದವರು ಬೆಂಗಳೂರು, ಮೈಸೂರುಗಳಲ್ಲಿ ಕಾವೇರಿ ಜಲವಿವಾದದ ಹಿನ್ನೆಲೆಯಲ್ಲಿ ನಡೆದ ಗಲಭೆಗಳ ಬಗ್ಗೆ ಸತ್ಯಶೋಧನ ಸಮಿತಿಗಳ ಅಧ್ಯಯನದ ವರದಿಯನ್ನಾಗಿ 'ಕಾವೇರಿ ಕಿಚ್ಚು' ಕೃತಿಯನ್ನು ಪ್ರಕಟಿಸಿದ್ದಾರೆ.

೨೩. ಪ್ರಜಾತಾಂತ್ರಿಕ ಜನರ ವೇದಿಕೆ., ಮೇಲಿನದೆ, ಪು-೪೯.

೨೪. ಈ ಹೆಸರುಗಳ ಪಟ್ಟಿ ಪರಿಪೂರ್ಣವಲ್ಲ.

೨೫. ಶಾಂತಕವಿ, ಆಲೂರ ವೆಂಕಟರಾಯರಿಂದ ಹಿಡಿದು ಈ ದಿನದವರೆವಿಗೂ ಕನ್ನಡದ ಬಗೆಗೆ ಕಾಳಜಿಯಿಂದ ದುಡಿದ, ದುಡಿಯುತ್ತಿರುವವರ ಪ್ರಧಾನವಾದ ಕೊರಗು 'ಕನ್ನಡಿಗರು ನಿರಭಿಮಾನಿ'ಗಳು ಎಂಬುದು.

❑❑

## ೮.೧.೧. ತಳೆದ ನಿಲುವುಗಳು

ಕರ್ನಾಟಕದ ಏಕೀಕರಣ ಆದ ನಂತರದಲ್ಲಿ ವಿಭಿನ್ನ ಪ್ರದೇಶಗಳ ಕನ್ನಡಿಗರು, ಸ್ಥಳೀಯ ಸಾಂಸ್ಕೃತಿಕ ವೈವಿಧ್ಯತೆಗಳಿಂದ ಭಾವನಾತ್ಮಕವಾಗಿ ಒಂದುಗೂಡುವುದು ಅವಶ್ಯಕವಾಗಿತ್ತು. ಈ ಪ್ರಕ್ರಿಯೆಗೆ ಕನ್ನಡಿಗರ ಮನೋಚಿಂತನೆಗಳು ಒಳಗಾಗುವುದು ಅವಸರದ ಸಂಗತಿ ಆಗಿರಲಿಲ್ಲ. ಏಕೆಂದರೆ ನೂರಾರು ವರ್ಷಗಳ ಕಾಲ ತಮ್ಮದೇ ಆದ ಅಭಿರುಚಿ, ಸಂಸ್ಕೃತಿಗಳಿಗೆ ಒಳಗಾಗಿದ್ದ ಕನ್ನಡಿಗರು ಏಕೀಕರಣವಾದಾಕ್ಷಣ 'ಏಕತ್ರ' ಸ್ಥಿತಿಗೆ ತಲುಪುವುದು ಅಸಾಧ್ಯ ಆಗಿತ್ತು. ಅದು ರಾಜಕೀಯವಾಗಿ ಒಂದುಗೂಡಿಸಿದಷ್ಟು ಸುಲಭವೂ, ಸರಳವೂ ಆಗಿರದ ಪ್ರಕ್ರಿಯೆ. ಹೇಗೆ ಏಕೀಕರಣಕ್ಕೆ ಕನ್ನಡದ ಸೃಷ್ಟಿಶೀಲ ಜಗತ್ತು ಹಾಗೂ ಅವರ ಸಾಹಿತ್ಯಕ ಚಟುವಟಿಕೆಗಳು ಕಾರಣವಾದವೋ ಹಾಗೆಯೇ ಅನಂತರದ ಭಾವನಾತ್ಮಕ ಮಿಲನಕ್ಕೂ ಮುಖ್ಯ ಆಗಿತ್ತು. ಈ ಮಿಲನಕ್ಕೆ ರಾಜಕಾರಣಕ್ಕಿಂತ ಸಾಹಿತ್ಯಕ್ಕೆ ಹೆಚ್ಚಿನ ಸಾಮರ್ಥ್ಯ ಇತ್ತು. ಆದರೆ ಈ ಪ್ರಕ್ರಿಯೆಗೆ ಅಥವಾ ಸಾಂಸ್ಕೃತಿಕ ಅವಸ್ಥಾಂತರಕ್ಕೆ ಕನ್ನಡಿಗರು ಮಾನಸಿಕವಾಗಿ ಸಿದ್ಧಗೊಳ್ಳುವ ಹಂತದಲ್ಲಿ ಇರುವಾಗಲೇ ಭಿನ್ನ ರೀತಿಯ ಗಂಡಾಂತರಗಳಲ್ಲಿ ಸಿಲುಕಿದ ಅನುಭವವನ್ನು ತಾಳಿದ್ದುಂಟು. ಈ ಅನುಭವವು ಏಕೀಕರಣಗೊಂಡ ರಾಜಕೀಯ ವ್ಯವಸ್ಥೆಯ ಅಸಾಮರ್ಥ್ಯತೆಯಿಂದ ಆದದ್ದು. ಅದರ ಪರಿಣಾಮವಾಗಿ ಕನ್ನಡಿಗರ ಬದುಕು, ನಾಡಿನ ಅಭಿವೃದ್ಧಿಗೆ ಸಂಬಂಧಿಸಿದಂಥ ಭವಿಷ್ಯದ ಕನಸು ನನಸಾಗುವ ಸೂಚನೆಗಳು ಕಾಣಲಿಲ್ಲ. ರಾಜಕಾರಣವನ್ನು ಒಳಗೊಂಡಂತೆ ಸಾಮಾಜಿಕ, ಆರ್ಥಿಕ, ಭೌಗೋಳಿಕ, ಸಾಂಸ್ಕೃತಿಕ ಪಂಥಗಳಲ್ಲೂ ಭರವಸೆಯ ವಾತಾವರಣ ಮೂಡುವುದು ಅಸಂಭವ ಎನ್ನುವ ಸ್ಥಿತಿಗೆ ಕನ್ನಡಿಗರು ತಲುಪಿದ್ದರೇನೋ ಎಂಬ ಗುಮಾನಿ ಬರುತ್ತದೆ. ನಾಡಿನ ಚರಿತ್ರೆಯನ್ನು ಅದರಲ್ಲೂ ಏಕೀಕರಣದ ಅನಂತರದ ಚರಿತ್ರೆ ಈ ಗುಮಾನಿಗೆ ಎಡಮಾಡಿಕೊಡುತ್ತದೆ. ಅಂದರೆ ಏಕಾಏಕಿ ಬದಲಾವಣೆಗಳನ್ನು ಕಾಣುವ, ಸವಾಲುಗಳನ್ನು ಎದುರಿಸುವ, ಸಮಸ್ಯೆಗಳನ್ನು ನಿವಾರಿಸುವ ನಿಟ್ಟಿನಲ್ಲಿ ವಿಳಂಬ ಆಗುತ್ತದೆ ಎಂಬುದೇ ಅಂದಿನ ಕನ್ನಡಿಗರ ಭ್ರಮನಿರಸನಕ್ಕೆ ಕಾರಣ ಆಯಿತು.

ಕನ್ನಡಿಗರ ಭ್ರಮನಿರಸನಕ್ಕೆ ಅಂದಿನ ಸಮಕಾಲೀನ ಸ್ಥಿತಿಗತಿಗಳು ಕಾರಣ ವಾಗಿರುವಂತೆಯೇ, ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸುವ ಸಾಮರ್ಥ್ಯವನ್ನೂ ತಂದುಕೊಟ್ಟವು. ಅಂದರೆ ಆಂತರಿಕವಾದಂಥ ಹತ್ತು-ಹಲವು ಅವಸ್ಥಾಂತರಗಳ ಜೊತೆಗೆ ಬಾಹ್ಯವಾದ ಕೆಲವು ಆತಂಕಗಳು ಕನ್ನಡಿಗರನ್ನು ಕಾಡತೊಡಗಿದವು. ಈ ಆತಂಕಗಳ ನಿವಾರಣೆಗೆ ರಾಜ್ಯದ ರಾಜಧಾನಿ ಹಾಗೂ ಚುಕ್ಕಾಣಿ ಹಿಡಿದವರ ಕಡೆಗೆ ನೋಡುವಂತೆ ಆಗಿತ್ತು. ಆದರೆ ವಾಸ್ತವದಲ್ಲಿ ರಾಜಧಾನಿಯಲ್ಲಿನ ಆತಂಕಗಳೇ ಬೇರೆ ಆಗಿದ್ದವು. ರಾಜಧಾನಿ ಬೆಂಗಳೂರು ಹಳೆಯ ಮೈಸೂರು ಸಂಸ್ಥಾನದ ಪ್ರಮುಖ ಅಭಿವೃದ್ಧಿಯುತ ನಗರ. ಅಂತೆಯೇ ಅನ್ಯಭಾಷಿಕರ

ಅದರಲ್ಲೂ ತಮಿಳು ಭಾಷಿಕರ ಸಾಂಸ್ಕೃತಿಕ ಧಾಳಿಗೆ ತುತ್ತಾದ ತಾಣವೂ ಆಗಿತ್ತು. ಇಂಥ ಸನ್ನಿವೇಶದಲ್ಲಿ ಕನ್ನಡಿಗರು ತಮ್ಮತನದ ಅಸ್ತಿತ್ವವನ್ನು ಕಂಡುಕೊಳ್ಳಲು ಏಕೀಕರಣದ ಅನಂತರ ಹೆಣಗಾಡಿದರು. ಹೀಗಾಗಿ ರಾಜ್ಯದ ಇತರೆಡೆಗಳಲ್ಲಿನ ಆತಂಕಗಳಿಗಿಂತ ಸ್ಥಳೀಯವಾದ ಪ್ರತಿರೋಧಗಳನ್ನು, ಸವಾಲುಗಳನ್ನು ಎದುರಿಸುವುದು ಅನಿವಾರ್ಯ ಆಗಿತ್ತು. ಈ ಸನ್ನಿವೇಶದಲ್ಲಿ ಸಾಂಸ್ಕೃತಿಕ ಧಾಳಿಯ ಜೊತೆಗೆ, ಅಲ್ಲಲ್ಲಿ ಕನ್ನಡಿಗರ ಮೇಲೆ ಆಗುತ್ತಿದ್ದ ಹಿಂಸಾತ್ಮಕ ಪ್ರವೃತ್ತಿಗಳನ್ನು ಸಹಿಸಿಕೊಳ್ಳುವುದು ಸಾಧ್ಯ ಆಗಲಿಲ್ಲ. ಇಂಥ ಆಕ್ರಮಣಕಾರಿ ಪ್ರವೃತ್ತಿಗಳನ್ನು ಎದುರಿಸಲು ಹುಟ್ಟಿಕೊಂಡದ್ದೇ ಕನ್ನಡಿಗರ ಪ್ರತಿಘಟನಾತ್ಮಕ ಚಟುವಟಿಕೆಗಳು. ಅದನ್ನೇ 'ಕನ್ನಡ ಚಳವಳಿ' ಎನ್ನಲಾಗಿದೆ. ಅಂದರೆ ಕನ್ನಡ-ಕನ್ನಡಿಗ-ಕರ್ನಾಟಕಗಳಿಗೆ ಪೂರಕವಾದ ಚಳವಳಿಯೇ 'ಕನ್ನಡ ಚಳವಳಿ.'

೧೯೬೦ರ ದಶಕದ ಕನ್ನಡ ಚಳವಳಿಯ ಸ್ವರೂಪಕ್ಕೂ ೧೯೮೦ ದಶಕದ ಚಳವಳಿಗಳಿಗೂ ಭಿನ್ನವಾದ ವ್ಯತ್ಯಾಸಗಳನ್ನು ಕಾಣಲು ಸಾಧ್ಯ. ಅಂದರೆ ಆರಂಭದಲ್ಲಿ ಕನ್ನಡಿಗರ ಕಾಳಜಿ ಸಹಜವೂ, ಸಂಘಟನಾತ್ಮಕವೂ ಆಗಿತ್ತು. ಆದರೆ ಅದು ಕ್ರಮೇಣ ರಾಜಕಾರಣ, ಜಾತಿ, ಸ್ವಾರ್ಥದ ಆಮಿಷಗಳಿಗೆ ಒಳಗಾಗಬೇಕಾಯಿತು. ಅಲ್ಲದೆ ವಿಘಟನಾತ್ಮಕ ನೆಲೆಗಳನ್ನು ಗುರುತಿಸಿಕೊಳ್ಳುವಲ್ಲಿ ತೃಪ್ತಿ ಪಟ್ಟುಕೊಂಡದ್ದನ್ನು ಕಾಣಬಹುದು. ಬಹುಶಃ ಇದಕ್ಕೆಲ್ಲ ಕಾರಣ ಬದಲಾದ ಸನ್ನಿವೇಶಗಳೇ ಎಂದು ತಿಳಿಯುತ್ತದೆ. ಆದರೆ ರಾಜಕಾರಣದ ಕಬಂಧ ಬಾಹುಗಳು ಕನ್ನಡ ಚಳವಳಿಗೆ ಕುತ್ತನ್ನು ತಂದುವು. ಅದು ಎಷ್ಟರ ಮಟ್ಟಿನ ಹಾನಿ ಎಂದು ಮೌಲ್ಯಮಾಪನ ಮಾಡುವುದಾದರೆ, ನಮ್ಮಲ್ಲಿ ನಮ್ಮವರಿಗಾಗಿ ಪ್ರಾದೇಶಿಕವಾದ ರಾಜಕೀಯ ಪಕ್ಷವನ್ನು ಕಟ್ಟಿಕೊಳ್ಳಲಾರದಷ್ಟರ ಮಟ್ಟಿಗೆ. ಈ ಸೋಲು ಕನ್ನಡದ ಅಥವಾ ಕನ್ನಡಿಗರ ಸೋಲು ಎಂದೇ ಭಾವಿಸಬೇಕು. ಏಕೆಂದರೆ ನಮ್ಮ ಸುತ್ತಮುತ್ತಲಿನ ರಾಜ್ಯಗಳಲ್ಲಿನ ಭಾಷಿಕವಾದ ಪ್ರಕ್ರಿಯೆಗಳು ಭಿನ್ನವಾಗಿದ್ದವು. ಅಲ್ಲದೆ ಪ್ರಗತಿ ಪಥದಲ್ಲಿಯೂ ಇದ್ದುದರಿಂದ. ಉದಾಹರಣೆಗೆ ೧೯೬೦ರ ಘಟ್ಟದಲ್ಲಿ ನೆರೆಯ ರಾಜ್ಯಗಳ ಪ್ರಗತಿ ಆಯಾ ರಾಜಕೀಯ ನಾಯಕರ ದೃಢ ಸಂಕಲ್ಪಗಳೊಂದಿಗೆ ಬೆಸೆದುಕೊಂಡಿತ್ತು. ಈ ದಿಸೆಯಲ್ಲಿ ಆಂಧ್ರದಲ್ಲಿ ಗೋಪಾಲರೆಡ್ಡಿ, ಸಂಜೀವರೆಡ್ಡಿ, ತಮಿಳುನಾಡಿನಲ್ಲಿ ಕಾಮರಾಜ ನಾಡಾರ್, ಸುಬ್ರಹ್ಮಣ್ಯಂ, ಕೇರಳದಲ್ಲಿ ಪಟ್ಟಂತಾನಂ ಪಿಳ್ಳೆ, ಶಂಕರ್, ಮಹಾರಾಷ್ಟ್ರದ ಚವ್ಹಾನ್ ಮೊದಲಾದ ರಾಜಕೀಯ ನಾಯಕರು ಮಾಡಿದ್ದ ಮುಂದಾಲೋಚನೆಗಳು ಮಹತ್ವವಾದುವು. ಕನ್ನಡದ ರಾಜಕಾರಣಿಗಳಿಗೆ ಈ ಮುಂದಾಲೋಚನೆ ಇರಲಿಲ್ಲವೇ ಎಂಬುದು ಇನ್ನು ಬಿಡಿಸಲಾಗದ ಪ್ರಶ್ನೆ. ಏಕೆಂದರೆ ಗಡಿ ಸಮಸ್ಯೆಗಳು ಬಂದಾಗ ಅವರ ಅಭಿವ್ಯಕ್ತತೆಯ ಮುಂದೆ ನಮ್ಮವರು ಪ್ರಭಾವಕಾರಿ ಆಗಲೇ ಇಲ್ಲ.

ಸಾಂಸ್ಕೃತಿಕವಾಗಿಯೂ ನಮ್ಮ ಕನ್ನಡ ಸಾಹಿತ್ಯ, ಸಂಸ್ಕೃತಿ ಚಿಂತನೆಗಳು ಶ್ರೀಮಂತವಾಗಿದ್ದರೂ ಒಂದು ರೀತಿಯಲ್ಲಿ ದೃಢವಾದ, ಪ್ರಭಾವಕಾರಿಯಾದ ಭಾಷಿಕ ಸಂಘಟನೆಯನ್ನು ಕಟ್ಟುವಲ್ಲಿ ಅಂಥ ಪ್ರಗತಿ ಆಗಲಿಲ್ಲ. ಹಾಗಾದರೆ ಶಿವಸೇನೆ, ದ್ರಾವಿಡ ತತ್ವಗಳಲ್ಲಿ ಅವರಿಗೆ ಸಾಹಿತ್ಯಕವಾಗಿ ಬಲ ಅಥವಾ ಶಕ್ತಿಗಳು ಲಭ್ಯ ಆಗಿದ್ದವೆ ಎಂಬ ಪ್ರಶ್ನೆ ಕಾಡುತ್ತದೆ. ಆದರೆ ವಾಸ್ತವದಲ್ಲಿ ಅವರಿಗೆ ಅಂಥ ಸಾಹಿತ್ಯಕ ಸೂಕ್ಷ್ಮತೆ, ಬೆಂಬಲಗಳು ಇರಲಿಲ್ಲ. ಬದಲಾಗಿ ಕ್ರಮೇಣ 'ಭಾಷಿಕ'ವಾದ ಪ್ರೀತಿ, ಅಭಿಮಾನಗಳೇ ಮರಾಠಿ, ತಮಿಳು ಭಾಷಿಕರನ್ನು ಆಕ್ರಮಣಕಾರಿಗಳನ್ನಾಗಿ ಮಾಡಿದವೇನೋ ಅನ್ನಿಸುತ್ತದೆ.

ಭಾಷಿಕವಾದ ಆಕ್ರಮಣಕಾರಿ ಪ್ರವೃತ್ತಿಗಳಿಗೆ ಕನ್ನಡಿಗರು ಪ್ರಯತ್ನಿಸಲಿಲ್ಲ ಎಂಬುದು ಮುಖ್ಯವಾದ ಸಂಗತಿ. ಬದಲಾಗಿ ಕನ್ನಡಕ್ಕೆ ಅದರದೇ ಆದ ಸ್ಥಿತಿಗತಿಗಳನ್ನು, ಪ್ರಾತಿನಿಧ್ಯಗಳನ್ನು ತಂದುಕೊಡುವಲ್ಲಿ ನಡೆದ ಪ್ರಕ್ರಿಯೆಗಳು ಕನ್ನಡ ಚಳವಳಿಯಲ್ಲಿ ಮಹತ್ವವಾದುವು. ಇಲ್ಲಿ 'ಕನ್ನಡ' ಎಂಬುದು ಕೇವಲ ಭಾಷೆ ಅಲ್ಲ. ಬದಲಾಗಿ ಜನ, ನುಡಿ, ಸಮಾಜ, ಚರಿತ್ರೆ, ಸಂಸ್ಕೃತಿ, ಅಭಿಮಾನ ಎಲ್ಲವೂ ಆಗಿದೆ. ಈ ನಿಟ್ಟಿನಲ್ಲಿ ತಾತ್ವಿಕವಾಗಿ ಜಾಗೃತಿ ಮೂಢಿಸುವುದು ಅನಿವಾರ್ಯ ಆಗಿತ್ತು. ಆ ಕೆಲಸ ಆಗಿದ್ದು ಆಲೂರ ವೆಂಕಟರಾವ್, ಅ.ನ.ಕೃ, ರಾಮಮೂರ್ತಿ ಮತ್ತು ಮೊದಲಾದವರ ಚಟುವಟಿಕೆಗಳಿಂದ. ತಾತ್ವಿಕ ಭೂಮಿಕೆ ದೊರೆತ ಅನಂತರ ಪ್ರಭಾವಕಾರಿಯಾಗಿ ಬೆಳೆಯಬೇಕಿದ್ದ ಕನ್ನಡ ಚಳವಳಿ ವೈಯಕ್ತಿಕ ನೆಲೆಗಳ ಅಸಮಾಧಾನಗಳಿಂದ ಕುಂಠಿತಗೊಂಡದ್ದು ಕನ್ನಡಿಗರ ದೌರ್ಬಲ್ಯ. ಇದು ಒಂದು ರೀತಿಯಲ್ಲಿ ಕನ್ನಡ ಚಳವಳಿಯ ವಿರೋಧಾಭಾಸ ಎಂದರೆ ತಪ್ಪಲ್ಲ.

ರಾಜಕಾರಣ, ಜಾತೀಯತೆಗಳ ಒತ್ತಡಗಳು, ಲಾಬಿಗಳು ಕನ್ನಡ ಚಳವಳಿಗೆ ಇನ್ನೊಂದು ಮಾರಕತೆಯನ್ನು ಉಂಟುಮಾಡಿದವು. ಸಂಘಟನಾತ್ಮಕತೆಗೆ ವಿರುದ್ಧವಾಗಿ ಅಂದರೆ ಛಿದ್ರ ಛಿದ್ರವಾಗಿ ಒಡೆದು ಹೋಗುವಂತೆ ಕನ್ನಡ ಚಳವಳಿ, ಕಾರ್ಯಕರ್ತರು ರೂಪುಗೊಂಡದ್ದು ವಿಪರ್ಯಾಸವೇ ಸರಿ. ಇದರಿಂದ ಅನ್ಯ ಭಾಷೆ, ಸಾಂಸ್ಕೃತಿಗಳು ಮತ್ತೆ ಮತ್ತೆ ತಲೆ ಎತ್ತುವಂತೆ ಆದವು. ಕನ್ನಡಿಗರ ಹೃದಯ ವೈಶಾಲ್ಯತೆಯು ಬೇರೆ ಭಾಷಿಕರಂತೆ ಸಂಕುಚಿತವಾಗಿ ಚಿಂತನೆ ಮಾಡುವುದನ್ನು ತಪ್ಪಿಸುತ್ತಾ ಬಂದಿದೆ. ಹೀಗಾಗಿ ಇಂದು ಕನ್ನಡ-ಕನ್ನಡಿಗ-ಕರ್ನಾಟಕದ ಅಭಿವ್ಯಕ್ತತೆಯು ಪ್ರಗತಿ ಅನ್ನಿಸಿದರೂ ನಿರೀಕ್ಷೆ ಮಾಡಿದಷ್ಟು ಅಲ್ಲ ಎಂದು ಸಮಾಧಾನಪಟ್ಟುಕೊಳ್ಳಬೇಕಿದೆ. ಇಂಥ ವಿರೋಭಾಸಗಳ ನಡುವೆ 'ಕನ್ನಡ ಚಳವಳಿ' ತನ್ನದೇ ಆದ ಮಿತಿಗಳಲ್ಲಿ ಮುನ್ನಡೆದಿದೆ.

ಕನ್ನಡ ಚಳವಳಿಗಳ ವಿಭಿನ್ನ ಧಾರೆಗಳ ಹರವುಗಳನ್ನು ಪರಿಶೀಲಿಸಿದಾಗ ಕೆಲವು ಸೂಕ್ಷ್ಮವಾದ, ಅಷ್ಟೇ ಸಂಕೀರ್ಣವೂ ಆದ ಒಳನೋಟಗಳು ಕಾಣಿಸಿಕೊಳ್ಳುತ್ತವೆ. ಅವುಗಳಲ್ಲಿ 'ಭಾಷಿಕ' ಹಿನ್ನೆಲೆಯಲ್ಲಿ ನಡೆದ 'ಹಿಂಸೆ'ಗಳು ಪ್ರಧಾನ. ಭಾಷೆಗೆ ಜನಾಂಗೀಯವಾದ ಸೂಕ್ಷ್ಮ ಸಂವೇದನೆಗಳು ಅಡಕವಾಗಿರುತ್ತವೆ. ಭಾಷೆ ಎಂಬುದು ಇಲ್ಲಿ ಸಂಸ್ಕೃತಿಯೊಂದರ ಸಂಕೇತವೂ ಹೌದು. ಬಹುಸಂಖ್ಯಾತರ ನಡುವೆ ಕೆಲವೇ ಜನರನ್ನು ಹೊಂದಿರುವ ಸಮೂಹವೊಂದು ತನ್ನ ಭಾಷಿಕ ನೆಲೆಗಳನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸುವ ನಿಟ್ಟಿನಲ್ಲಿ 'ಹಿಂಸೆ'ಗಳು ಹುಟ್ಟಿಕೊಳ್ಳುತ್ತವೆ. ಅಂದರೆ ಬಹುಸಂಖ್ಯಾತರ ಭಾಷಿಕ ಶಕ್ತಿ-ಸಾಮರ್ಥ್ಯಗಳನ್ನು ಅಲ್ಲಗಳೆದು ತಮ್ಮ ಭಾಷೆಗೆ ಹೆಚ್ಚಿನ ಪ್ರಾಧಾನ್ಯತೆಗಳನ್ನು ಗಳಿಸುವ ಹುನ್ನಾರಗಳಲ್ಲಿ ತೊಡಗುವುದೇ ಎಲ್ಲ ಅಪಾಯಗಳಿಗೂ ಮೂಲ. ಈ ದಿಸೆಯಲ್ಲಿಯೆ ತಮಿಳು ಮತ್ತು ಆ ಭಾಷೆಯನ್ನು ಆಡುವ ಜನರು ೧೯೬೦ರ ದಶಕದಲ್ಲಿ ನಡೆಸಿದ ಹುನ್ನಾರಗಳನ್ನು ಎತ್ತಿ ಹಿಡಿಯುವಂತೆ ಮಾಡುವುದು. ಹಿಂದಿ, ಇಂಗ್ಲಿಷಿಗೂ ಈ ಮಾತುಗಳನ್ನು ಅನ್ವಯಿಸಬಹುದು. ಆದರೆ ಆಡಳಿತ ಅಥವಾ ಪ್ರಭುತ್ವದ ಹಿನ್ನೆಲೆಯಲ್ಲಿ ಈ ಭಾಷೆಗಳ ಸಾಮರ್ಥ್ಯವನ್ನು ತಡೆಯುವ ಪ್ರಯತ್ನಗಳನ್ನು ನೋಡಲು ಸಾಧ್ಯ. ಆದರೆ ತಮಿಳು ಭಾಷಿಕರ ಪರಿಸ್ಥಿತಿಗಳೇ ಭಿನ್ನವಾದವು. ಅಂದರೆ ತಮಿಳರು ಕನ್ನಡದ ಸಂವೇದನೆಗೆ ತಮ್ಮನ್ನು ತಾವು ಒಳಗು ಮಾಡಿಕೊಳ್ಳದೆ ಪ್ರತಿರೋಧಗಳನ್ನು, ಅವಮಾನಗಳನ್ನು ಸೃಷ್ಟಿ ಮಾಡಿದ್ದೇ ಕಾರಣವಾಗುತ್ತವೆ.

ಆದ್ದರಿಂದಲೇ ಈ ಥರದ ದುಂಬತನಗಳು ಈ ಹೊತ್ತು (೧೯೯೦ರ ದಶದಲ್ಲಿ) ಯಾವುದೇ ಸಮಸ್ಯೆಯನ್ನು ಸಹ 'ಭಾಷಿಕ' ನೆಲೆಗೆ ದೂಡುವಂತೆ ಮಾಡಿರುವುದು. ಉದಾಹರಣೆಗೆ ನೀರು, ಅಣೆಕಟ್ಟು, ಗಡಿ, ವ್ಯಾಪಾರ - ವಹಿವಾಟು ಮೊದಲಾದ ನೆಲೆಗಳಲ್ಲಿ ಹುಟ್ಟಿಕೊಳ್ಳುವ ಸಮಸ್ಯೆಗಳು 'ಭಾಷಿಕ' ಹಂತದಲ್ಲಿ ಕೊನೆಗೊಳ್ಳುವುದನ್ನು ಗಮನಿಸಬಹುದು. ಕಾವೇರಿ ನೀರಿನ ಹಂಚಿಕೆ ಸಮಸ್ಯೆಯು ತಮಿಳು-ಕನ್ನಡಿಗರ ಸ್ವಾಭಿಮಾನದ ಸಂಕೇತವಾಗಿ ಪರ್ಯಾವಸಾನವಾಗುವುದು ವಿಪರ್ಯಾಸವೇ ಸರಿ. ಅಷ್ಟೇ ಅಲ್ಲದೆ ಅವು ಕನ್ನಡ ಚಳವಳಿಯ ಸ್ವರೂಪ ಪಡೆದು, ಹಿಂಸೆಗೂ ಒಳಗಾಗುತ್ತವೆ. 'ಕನ್ನಡ'ವನ್ನು ಉದಾರವಾಗಿ ಪರಿಗಣಿಸುವಂತೆ 'ತಮಿಳ'ನ್ನು ಪರಿಗಣಿಸುವುದು ಸಾಧ್ಯ ಆಗುವುದೇ ಇಲ್ಲ. ಅಂತೆಯೇ ತಮಿಳು ಭಾಷಿಕರಂತೆ ಆಕ್ರಮಣಕಾರಿ, ಪ್ರವೃತ್ತಿಗಳನ್ನು ಕನ್ನಡಿಗರು ಬೆಳೆಸಿಕೊಳ್ಳಲು ಸಾಧ್ಯವಿಲ್ಲ. ಇಂದು ತಮಿಳರು ಹಾಗೂ ಅವರ ಸಂಘಟನೆಗಳು ಕನ್ನಡದೊಂದಿಗೆ ಸ್ಪಂದಿಸಲು ಆರಂಭಿಸಿವೆ. ಗೋಕಾಕ್ ಚಳವಳಿಯಂಥ ಕನ್ನಡ ಚಳವಳಿಗೂ ಅನ್ಯಭಾಷಿಕರು ತಮ್ಮನ್ನು ತೊಡಗಿಸಿಕೊಂಡಿದ್ದು ಉಂಟು. ತಮಿಳರ ಅಣ್ಣಾ ಡಿ.ಎಂ.ಕೆ, ಎಂ. ಜಿ. ಆರ್ ಸಂಘಟನೆಗಳಂಥವು ಕನ್ನಡದ ಅಳಿವು-ಉಳಿವುನೊಂದಿಗೆ ತಮ್ಮ ಅಳಿವು-ಉಳಿವುಗಳನ್ನು ಗುರುತಿಸಿಕೊಳ್ಳುತ್ತಿವೆ. ಕನ್ನಡ ಮಾಧ್ಯಮಗಳಲ್ಲಿ ಕಲಿಯುತ್ತಿದ್ದಾರೆ ಕನ್ನಡದಲ್ಲಿ ವ್ಯವಹರಿಸುತ್ತಿದ್ದಾರೆ. ಈ ಬೆಳವಣಿಗೆಗಳು ಕನ್ನಡ ಚಳವಳಿಗಳ ಪ್ರಕ್ರಿಯೆಗಳಿಂದಲೇ ಸಾಧ್ಯ ಆಗಿದ್ದು ಎಂದರೆ ತಪ್ಪಾಗಲಾರದು.

ಕನ್ನಡ ಚಳವಳಿಯ ವಿಭಿನ್ನ ಘಟ್ಟಗಳನ್ನು ಪರಿಶೀಲಿಸಿದಾಗ ರಾಜಕಾರಣದ ಸ್ವಾರ್ಥ, ಸಂಕುಚಿತತೆಗಳ ನಡುವೆ ಒಂದಷ್ಟು ಪ್ರಾಮಾಣಿಕವಾದ ಕನ್ನಡ ಪರವಾದ ಸಂಘಟನೆಗಳ ಕಾರ್ಯಕ್ರಮಗಳು 'ಕನ್ನಡತನ'ಕ್ಕಾಗಿ ಹೆಣಗಾಡುತ್ತಿರುವುದು ಕಂಡುಬರುತ್ತದೆ. ಆರಂಭದಲ್ಲಿ ಬೆಂಗಳೂರಿನಲ್ಲಿ ಹುಟ್ಟಿಕೊಂಡ 'ಕನ್ನಡ ಚಳವಳಿ' ನಾಡಿನಾದ್ಯಂತ ಒಂದೇ ಧ್ವನಿಯಾಗುತ್ತದೆ ಎಂದು ಅರಿತದ್ದು ಸುಳ್ಳು ಆಯಿತು. ಏಕೆಂದರ ಬೆಂಗಳೂರಿನ ಸಮಸ್ಯೆ-ಆಂತಕಗಳು ಕನ್ನಡ ಚಳವಳಿಯನ್ನು ಎಲ್ಲ ಕಡೆಗಳಿಗೂ ಪಸರಿಸುವಂತೆ ಮಾಡಲೇ ಇಲ್ಲ. ಗಡಿ, ನೀರು, ಗೋಕಾಕ್ ಚಳವಳಿಯಂಥ ಕೆಲವು ಘಟನೆಗಳನ್ನು ಕೇಂದ್ರೀಕರಿಸಿದ ಪ್ರತಿಭಟನೆಗಳನ್ನು ಹೊರತುಪಡಿಸಿದರೆ ಉಳಿದ ಬಹುಪಾಲು ಚಳವಳಿಗಳು ಆಯಾ ಸ್ಥಾನಿಕವಾದ ಪರಿಮಿತಿಗಳಲ್ಲಿಯೆ ಕೊನೆಗೊಂಡದ್ದೇ ಹೆಚ್ಚು. ಗಮನಿಸಬೇಕಾದ ಅಂಶವೆಂದರೆ ಸ್ಥಾನಿಕವಾದ ಆಂತಕಗಳೇ ನಾಡಿನ ಈ ಹೊತ್ತಿನ ಕನ್ನಡ ಪರವಾದ ಪರಿಸರಕ್ಕೆ, ಕೆಲವು ಅಭಿವೃದ್ಧಿ ಕಾರ್ಯಗಳಿಗೆ ಕಾರಣ ಆದವು ಎಂಬುದನ್ನು. ಅಲ್ಲದೆ ಇದಕ್ಕೆ ಅಂದಿನಿಂದ ದುಡಿದ, ದುಡಿಯುತ್ತಿರುವ ಅನೇಕ ಕನ್ನಡ ಕಾಳಜಿಯ ಕಾರ್ಯಕರ್ತರ, ಸಂಘ-ಸಂಸ್ಥೆಗಳ ನಿಜವಾದ, ಪ್ರಾಮಾಣಿಕವಾದ ಭಾಷಿಕ ಅಭಿಮಾನ-ಪ್ರೀತಿಗಳೇ ಪ್ರಧಾನ ಆಗುತ್ತವೆ ಎಂದರೆ ತಪ್ಪಾಗಲಾರದು.

## ಅನುಬಂಧ ೧

## ಆಕರ ಹಾಗೂ ಪೂರಕ ಸಾಹಿತ್ಯ


೧. ಕೃಷ್ಣರಾಯ. ಅ.ನ., ಬರಹಗಾರರ ಬದುಕು, (ಮಡಗಾಂವ, ೧೯೭೨).
೨. ಕೃಷ್ಣರಾಯ, ಶಾ. ಮಂ., ರಸಚೇತನ, (ಮಡಗಾಂವ-ಗೋವಾ, ೧೯೭೦).
೩. ಕೃಷ್ಣರಾಯ, ಶಾ. ಮಂ., ಚಿರಚೇತನ, (ಗೋವಾ, ೧೯೭೨).
೪. ಜಾಣಗೆರೆ ವೆಂಕಟರಾಮಯ್ಯ., (ಪ್ರ. ಸಂ), ಕನ್ನಡ ಸೇನಾನಿ, (ಬೆಂಗಳೂರು, ೧೯೯೪).
೫. ಶ್ರೀನಿವಾಸ್. ವೆ., (ಸಂ), ಕನ್ನಡ ಚಳವಳಿ ರತ್ನ, (ಬೆಂ, ೧೯೯೬).
೬. ಚಂದ್ರಣ್ಣಗೌಡ ಕೆ. ವಿ., (ಪ್ರ. ಸಂ), ರಾಜಧಾನಿ, (ಬೆಂ, ೧೯೯೩).
೭. ರಾಮಮೂರ್ತಿ. ಮ., ಮೈಕೋ ಕನ್ನಡ ಕಾರ್ಮಿಕರ ದುರವಸ್ಥೆ, (ಬೆಂ, ೧೯೬೪).
೮. ರಾಮಮೂರ್ತಿ. ಮ., ಕರುನಾಡಿನಲ್ಲಿ ಕನ್ನಡಿಗರ ಸ್ಥಿತಿ? (ಬೆಂ.).
೯. ಪ್ರಕಟಣಾ ಸಮಿತಿ., ಸಂಪೂರ್ಣ ಕರ್ನಾಟಕ, (ಬೆಂ, ೧೯೬೬).
೧೦. ಮಹದೇವ ಬಣಕಾರ., ರಾಜ್ಯವಿಭಜನೆಯ ಅಪಸ್ವರ ನಿಲ್ಲಲಿ, (ಬೆಂ, ೧೯೬೯).
೧೧. ಅಶೋಕ, ದೊ. ಅ., ಕ್ರಾಂತಿ ಕರ್ನಾಟಕ, (ಬೆಂ, ೧೯೭೦).
೧೨. ಚಂದ್ರಶೇಖರ, ರಾ. ನಂ., ಕನ್ನಡ ಶಕ್ತಿ, (ಬೆಂ, ೧೯೯೮).
೧೩. ಚಂದ್ರಶೇಖರ, ರಾ. ನಂ., ಕನ್ನಡ ಹೋರಾಟಗಳು- ಒಂದು ನೋಟ, (ಬೆಂ, ೧೯೯೯).
೧೪. ಕಾಳೇಗೌಡ ನಾಗವಾರ, ನಟರಾಜ ಹುಳಿಯಾರ್ (ಸಂ)., ಭಾಷೆ ಮತ್ತು ಇತಿಹಾಸ, (ಬೆಂ, ೧೯೯೮).
೧೫. ರಾಮಣ್ಣ ಎಚ್. ಕೋಡಿಹೊಸಹಳ್ಳಿ. ರಹಮಾನ್ ಖಾನ್. (ಬೆಂ, ೧೯೯೫).
೧೬. ಗುರುಲಿಂಗ ಕಾಪಸೆ., ಕನ್ನಡ ಕಾವಲು, (ಹಂಪಿ, ೧೯೯೫).
೧೭. Bernard S. Cohn., Colonialism and its forms of knowledge, the British in India, (Delhi, 1997)
೧೮. ತಲ್ವಾಡಿ, ಬಿ. ಎಸ್., ನಡೆದು ಬಂದ ದಾರಿ, (ಬೆಂ. ೧೯೮೯).
೧೯. ಗೋಪಾಲಕೃಷ್ಣ ಅಡಿಗ, ಎಂ., ಕನ್ನಡ ಅಭಿಮಾನ ಮತ್ತು ಇತರ ಲೇಖನಗಳು, (ಸಾಗರ, ೧೯೭೨).
೨೦. ಸೂರ್ಯನಾಥ ಕಾಮತ್., ಕನ್ನಡಿಗ ಮಂಗಳವೇಡೆ, (ಬೆಂ, ೧೯೯೫).
೨೧. ಕುಲಕರ್ಣಿ, ಶೇ. ಗೋ., ನಾನು ಕಂಡ ಗೆಳೆಯರ ಗುಂಪು, (ಧಾರವಾಡ, ೧೯೮೦).
೨೨. ಗೋವಿಂದರಾಜು, ಸಿ. ಆರ್., ಕನ್ನಡ -ಕರ್ನಾಟಕತ್ವ, (ಹಂಪಿ, ೧೯೯೫).

೨೩. ಗೋವಿಂದರಾಜು, ಹಿ. ಆರ್., ಕರ್ನಾಟಕದ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು, (ಬೆಂ, ೧೯೯೫).
೨೪. ಗೋವಿಂದರಾಜು, ಹಿ. ಆರ್., ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ, (ಬೆಂ, ೧೯೯೮).
೨೫. ಪಾರ್ಥ ಚಟರ್ಜಿ, ದಿ ನೇಷನ್ಸ್ ಅಂಡ್ ಇಟ್ಸ್ ಫ್ರೆಗ್‌ಮೆಂಟ್ಸ್, (ಬಾಂಬೆ, ೧೯೯೪).
೨೬. ಬಿಪನ್‌ಚಂದ್ರ., ಏಸ್ಸೇಸ್ ಆನ್ ಕಾಂಟೆಂಪರರಿ ಇಂಡಿಯಾ, (ದೆಹಲಿ, ೧೯೯೩).
೨೭. ಜವರೇಗೌಡ, ದೇ., ಕನ್ನಡಿಗರೇ ಎಚ್ಚರಗೊಳ್ಳಿ, (ಮೈ, ೧೯೫೧).
೨೮. ಜವರೇಗೌಡ, ದೇ., ಕನ್ನಡದ ರೂವಾರಿ, (ಬೆಂ, ೧೯೮೫).
೨೯. ವಲ್ಲಭ ಮಹಾಲಿಂಗ ತಟ್ಟಿ., ಕನ್ನಡಿಗರ ಜನ್ಮಸಾರ್ಥಕತೆ, (ಧಾರವಾಡ, ೧೮೯೯).
೩೦. ದೊಡ್ಡಮೇಟಿ ಅಂದಾನಪ್ಪ., ಕನ್ನಡಿಗರ ಪ್ರಾರ್ಥನೆಗಳು (ಜಮಖಿಂಡಿ, ೧೯೯೨).
೩೧. ಪೂಜಾರ ನೀಲಗಂಗಯ್ಯ ಮತ್ತು ದೊಡ್ಡ ಮೇಟಿ ಜ್ಞಾನದೇವ (ಸಂ)., ರಾಜ್ಯದ ಹೆಸರು ‘ಕರ್ನಾಟಕ’ವೆಂದೇ ಆಗಬೇಕು, (ಬೆಂ, ).
೩೨. ನಾಯಕ, ಹಾ. ಮಾ., (ಸಂ)., ಕರ್ನಾಟಕಕ್ಕೆ ಶುಭವಾಗಲಿ (ಮೈ, ೧೯೭೬).
೩೩. ನಾಯಕ, ಹಾ. ಮಾ., ಕನ್ನಡ ಮನಸ್ಸು, (ಹುಬ್ಬಳ್ಳಿ, ೧೯೮೧).
೩೪. ನಾರಾಯಣ. ಪಿ. ವಿ., ಕನ್ನಡತನ ಮತ್ತು ಭಾರತೀಯತೆ, (ಬೆಂ, ೧೯೯೦).
೩೫. ತಲ್ಲೂರ ರಾಯನಗೌಡ ಪಾಟೀಲ., ಕರ್ನಾಟಕ-ಗಡಿಗೆರೆಗಳು, (ಬೈಲಹೊಂಗಲ).
೩೬. ಪಾಟೀಲ ಕೆ. ಎಫ್., ರಾಜಕೀಯ ಚಕ್ರವ್ಯೂಹದಲ್ಲಿ (ಬೆಂ, ೧೯೮೬).
೩೭. ಪಾಟೀಲ ಕೆ. ಎಫ್., ಮತ್ತು ಇತರರು (ಸಂ)., ಕರ್ನಾಟಕ, (ಬೆಂ, ೧೯೭೩).
೩೮. ಪಾಟೀಲ ಕೆ. ಎಫ್., ನೆನಪಿನ ಒರತೆ, ಭಾಗ-೧ (ರಾಣೆಬೆನ್ನೂರು, ೧೯೯೦).
೩೯. ಪಾಟೀಲ ಕೆ. ಎಫ್., ಕರ್ನಾಟಕ ಏಕೀಕರಣ ಹಾದಿಯಲ್ಲಿ, (ಹುಬ್ಬಳ್ಳಿ, ೧೯೫೬).
೪೦. ಜೀರಗೆ ಕಟ್ಟೆ ಬಸಪ್ಪ., ಕರ್ನಾಟಕದ ಯಾತ್ರೆ, (ಬೆಂ, ೧೯೭೩).
೪೧. ಪಾಟೀಲ ಪುಟ್ಟಪ್ಪ., ನನ್ನದು ಈ ಕನ್ನಡ ನಾಡು, (ಬೆಂ, ೧೯೭೫).
೪೨. ಪಾಟೀಲ ಪುಟ್ಟಪ್ಪ., ಉಸಿರಾಗಲಿ ಕನ್ನಡ, (ಮೈಸೂರು, ೧೯೯೨).
೪೩. ಮಹದೇವ ಬಣಕಾರ., ಕರ್ನಾಟಕ-ಮಹಾರಾಷ್ಟ್ರ (ಮಹಾಜನ ವರದಿ ವಿಶ್ಲೇಷಣೆ) (ಬೆಂ, ೧೯೭೯).
೪೪. ಮಹದೇವ ಬಣಕಾರ., ಕರ್ನಾಟಕ ಗಡಿ-ನುಡಿ, (ಬೆಂ).
೪೫. ಮಹದೇವ ಬಣಕಾರ., ಆಂಗ್ಲರ ಆಡಳಿತದಲ್ಲಿ ಕನ್ನಡ, (ಬೆಂ, ೧೯೮೬).
೪೬. ಬುರ್ಲಿ ಬಿಂದುಮಾಧವ (ಸಂ)., ಕರ್ನಾಟಕ ದರ್ಶನ, (ಧಾರವಾಡ, ೧೯೩೭).
೪೭. ಮುಗಳಿ, ರಂ. ಶ್ರೀ. (ಪ್ರ. ಸಂ), ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರ ಭಾಷಣಗಳು, (ಸಂ- ೧, ೨, ೩, ೪) ಗೊ. ರು. ಚ (ಸಂ) -೫. ಕಸಾಪ. (ಬೆಂ, ೧೯೭೦-೭೨, ೯೫).
೪೮. ಲಿಂಗಯ್ಯ, ಡಿ. (ಸಂ)., ರಾಜಕೀಯ ಪಟು (ಕೆಂಗಲ್ ಸನ್ಮಾನ ಗ್ರಂಥ), (ಬೆಂ, ೧೯೭೯).

೪೯. ಆಲೂರ ವೆಂಕಟರಾವ್., ನನ್ನ ಜೀವನ ಸ್ಮೃತಿಗಳು, (ಧಾರವಾಡ, ೧೯೭೪).
೫೦. ಆಲೂರ ವೆಂಕಟರಾವ್., ಕರ್ನಾಟಕತ್ವದ ವಿಕಾಸ, (ಧಾರವಾಡ, ೧೯೫೭).
೫೧. ಶಿವಮೂರ್ತಿ ಶಾಸ್ತ್ರಿ, ಬಿ., ಕರ್ನಾಟಕ ಸಂದರ್ಶನ ಭಾಗ-೧, (ಬೆಂ, ೧೯೬೨).
೫೨. ಶಿವಮೂರ್ತಿ ಶಾಸ್ತ್ರಿ, ಬಿ., ಕನ್ನಡ ಮತ್ತು ಸಂಸ್ಕೃತಿ, (ಬೆಂ, ೧೯೭೪).
೫೩. ಶ್ರೀಕಂಠಯ್ಯ, ಬಿ. ಎಂ., ಶ್ರೀ ಸಾಹಿತ್ಯ, (ಮೈಸೂರು, ೧೯೮೩).
೫೪. ಸಿದ್ಧವನಹಳ್ಳಿ ಕೃಷ್ಣಶರ್ಮ., ಕನ್ನಡ ಸಮಸ್ಯೆ, (ಬೆಂ).
೫೫. ಸಿಂಧುವಳ್ಳಿ ಅನಂತಮೂರ್ತಿ., ಗುಬ್ಬಿಕಂಪನಿ, (ಮೈ, ೧೯೭೯).
೫೬. ಸೀತಾರಾಮಯ್ಯ, ಎಂ. ವಿ., ಕನ್ನಡದ ಕತೆ, (ಬೆಂ, ೧೯೭೯).
೫೭. ಪೂರ್ಣಚಂದ್ರ ತೇಜಸ್ವಿ ಕೆ. ಪಿ., ಅಣ್ಣನ ನೆನಪುಗಳು (ಮೈ, ೧೯೯೬).
೫೮. ಸರೋಜಿನಿ ಚವಲಾರ., ಸಮಾತನ, (ಹುಬ್ಬಳ್ಳಿ, ೧೯೯೪).
೫೯. ಪ್ರಭಾಕರ, ನಾ, (ಸಂ)., ಅ.ನ.ಕೃ - ತ.ರಾ.ಸು (ಸ್ಮರಣ ಸಂಪುಟ), (ಮೈ, ೧೯೯೭).
೬೦. ಬಸವರಾಜ ಕಲ್ಗುಡಿ, (ಸಂ)., ಕನ್ನಡ ವಾರ್ಷಿಕ ೧೯೯೧, (ಹಂಪಿ, ೧೯೯೨).
೬೧. ವೈಕುಂಠರಾಜು, ಬಿ. ವಿ., ಸಂಪಾದಕರ ಡೈರಿ - ೧೯೮೬, (ಬೆಂ, ೧೯೯೩).
೬೨. ಶೇಷಗಿರಿರಾವ್, ಎಲ್. ಎಸ್ ಮತ್ತು ಇತರರು (ಸಂ)., ಕನ್ನಡ-ಕನ್ನಡಿಗ-ಕರ್ನಾಟಕ, (ಬೆಂ, ೧೯೯೬).
೬೩. ಸಿದ್ಧಲಿಂಗಯ್ಯ., ಊರುಕೇರಿ (ಆತ್ಮಕಥನ), (ಬೆಂ, ೧೯೯೬).
೬೪. ಹೊಸಮನಿ, ಎಸ್. ಬಿ., ಆಡಳಿತದಲ್ಲಿ ಕನ್ನಡ ಹಲವು ವಿಚಾರಗಳು, (ಶಿವಮೊಗ್ಗ, ೧೯೯೮).
೬೫. ಚಿದಾನಂದಮೂರ್ತಿ, ಎಂ., ಹುಬ್ಬಳ್ಳಿ ನೈರುತ್ಯ ವಲಯ ಕೇಂದ್ರವಾಗಿ, (ಬೆಂ, ೧೯೯೯).
೬೬. ನಾರಾಯಣ ಪಿ. ವಿ., ಗೋಕಾಕ್ ವರದಿ ಅನುಷ್ಠಾನದ ಸ್ಥಿತಿ-ಗತಿ (ಧಾರವಾಡ ೧೯೮೫).
೬೭. ಪ್ರಜಾ ತಾಂತ್ರಿಕ ಜನರ ವೇದಿಕೆ, ಕೋಮುವಾದಕ್ಕೊಂದು 'ಮಾಧ್ಯಮ', (ಬೆಂ, ೧೯೯೪).
೬೮. ಅನಂತಮೂರ್ತಿ, ಯು. ಆರ್., 'ಕನ್ನಡದ ಹಿತ' (ಕ. ಶ. ಕೇಂದ್ರದ ಬೆಳಗಾವಿ ಮಹಾ ಅಧಿವೇಶನದ ಅಧ್ಯಕ್ಷ ಭಾಷಣ, ೭-೧೨-೧೯೯೧), ಬೆತ್ತಲೆ ಪೂಜೆ ಯಾಕೆ ಕೂಡದು? (ಸಾಗರ, ೧೯೯೬).
೬೯. Janaki Nair., 'Memories of underdevelopment'- language and its identities in contemporary Karnataka, (Economic and political weekly, October 12-19, 1996).
೭೦. ಚಂದ್ರಶೇಖರ್, ರಾ. ನಂ., ಕನ್ನಡ ಚಳವಳಿ - ಸಾಹಿತಿಗಳ ಕಲಾವಿದರ ಬಳಗ, (ಬೆಂ, ೧೯೯೯).

❑❑

## ಅನುಬಂಧ ೨

## ಕನ್ನಡ ಚಳವಳಿ ಕುರಿತು ಸಂದರ್ಶಿಸಿದ ವ್ಯಕ್ತಿಗಳು

(ಧ್ವನಿ ಮುದ್ರಿಕೆಗಳಲ್ಲಿ)

೧. ಕೋಣಂದೂರು ಲಿಂಗಪ್ಪ - ಶಿವಮೊಗ್ಗ
೨. ಪ್ರೊ. ಚಂದ್ರಶೇಖರ ಪಾಟೀಲ - ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ
೩. ಕೋಡಿ ಹೊಸಪಳ್ಳಿ ರಾಮಣ್ಣ - ಅಧ್ಯಕ್ಷರು, ಕನ್ನಡ ಸಂಘರ್ಷ ಸಮಿತಿ
೪. ಡಾ. ದೊಡ್ಡ ಮೇಟಿ ಅಶೋಕ ಅಂದಾನಪ್ಪ - ಅಂದಾನಪ್ಪ ಅವರ ಮಗ (ಜಕ್ಕಲಿ)
೫. ವೆ. ಶ್ರೀನಿವಾಸ - ಅಧ್ಯಕ್ಷರು, ವೀರಸೇನಾನಿ ಮ. ರಾಮಮೂರ್ತಿ ಕನ್ನಡ ಬಳಗ, ಬೆಂಗಳೂರು
೬. ಬೆ. ಸಿ. ಈಶ್ವರಪ್ಪ - ಅಧ್ಯಕ್ಷರು, ಕರ್ನಾಟಕ ಮಿತ್ರ ಮಂಡಲಿ, ಬೆಂಗಳೂರು
೭. ಡಾ. ಎಂ. ಚಿದಾನಂದ ಮೂರ್ತಿ - ಅಧ್ಯಕ್ಷರು, ಕನ್ನಡ ಶಕ್ತಿ ಕೇಂದ್ರ
೮. ಡಾ. ಸೂರ್ಯನಾಥ ಕಾಮತ್ - ಇತಿಹಾಸಕಾರರು
೯. ಡಾ. ಎಂ. ಎಂ. ಕಲಬುರ್ಗಿ - ಕುಲಪತಿಗಳು, ಕನ್ನಡ ವಿ. ವಿ., ಹಂಪಿ
- ಮೊದಲಾದವರು.

❑❑

ಅನುಬಂಧ ೩

## ಕನ್ನಡ ಚಳವಳಿಗಾಗಿ ಪರಿಶೀಲಿಸಿದ ದಾಖಲೆಗಳು

೧. ೧೯೫೬ - ೧೯೯೯ರವರೆಗಿನ ಪ್ರಜಾವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ ಮೊದಲಾದ ಪತ್ರಿಕೆಗಳು,

೨. ೧೯೫೬ - ೧೯೯೯ರವರೆಗಿನ ಕೆಲವು ನಿಯತ ಕಾಲಿಕಗಳು.

೩. ೧೯೫೬ - ೧೯೯೯ ರವರೆಗಿನ ಕನ್ನಡ ನುಡಿ, ಪರಿಷತ್ಪತ್ರಿಕೆ, ಜಯಕರ್ನಾಟಕ, ಶರಣ ಸಾಹಿತ್ಯ ಸಂಪುಟಗಳು.

೪. ಕನ್ನಡ ಚಳವಳಿಗಾಗಿಯೇ ಹುಟ್ಟಿಕೊಂಡ ಕೆಲವು ಪತ್ರಿಕೆಗಳು - ಕನ್ನಡ ಯುವಜನ ಪತ್ರಿಕೆ, ಕನ್ನಡ ಜಾಗೃತ ಪತ್ರ, ಧ್ರುವ ಇತ್ಯಾದಿ.

೫. ಕರಪತ್ರಗಳು, ಚಳವಳಿಗಾಗಿ ತಯಾರಿಸಲಾದ ಸಣ್ಣ ಪುಸ್ತಿಕೆಗಳು, ಆಹ್ವಾನ ಪತ್ರಿಕೆಗಳು, ಚುನಾವಣಾ ಕರಪತ್ರಗಳು - ಇತ್ಯಾದಿ

❑❑

ಅನುಬಂಧ ೪

## ಕನ್ನಡ ಚಳವಳಿಯನ್ನು ಕುರಿತಂತೆ ಅಂಚೆ ಮೂಲಕವಾಗಿ ಮಾಹಿತಿಗಳನ್ನು ಕಳುಹಿಸಿದವರ ಪಟ್ಟಿ

೧. ಬಾಬುರಾಜೇಂದ್ರ ಚ. ಭದ್ರಾಪುರ (ಅಧ್ಯಕ್ಷರು), ರಾಷ್ಟ್ರೀಯ ರಚನಾತ್ಮಕ ಕ್ರಿಯಾರಂಗ ಹುಬ್ಬಳ್ಳಿ-೨೮, ಧಾರವಾಡ.

೨. ಆರ್. ರವಿರಾಜನ್ (ಅಧ್ಯಕ್ಷರು), ಕರ್ನಾಟಕ ರಾಜ್ಯ ಅಖಿಲ ಭಾರತ ಅಣ್ಣಾ ಡಿ.ಎಂ.ಕೆ., ಮೈಸೂರು.

೩. ಅಪ್ಪಾ ಸಾಹೇಬ ಪಾಟೀಲ (ಅಧ್ಯಕ್ಷರು), ಗಡಿ ಕನ್ನಡ ಅಭಿವೃದ್ಧಿ ಸಂಸ್ಥೆ, ಸೋಲಾಪುರ.

೪. ಡಾ. ಅ. ವಿರೂಪಾಕ್ಷಪ್ಪ (ಅಧ್ಯಕ್ಷರು), ಬಳಕೆದಾರರ ವೇದಿಕೆ, ಹೊಸಪೇಟೆ, ಸೊರಬ.

೫. ಧರೇಂದ್ರನಾಥ ಎ. ಬಿದರಕೋಟಿ (ಅಧ್ಯಕ್ಷರು), ಗಡಿನಾಡ ಯುವ ಬರಹಗಾರರ ಬಳಗ - ಕೇಂದ್ರ ಸಮಿತಿ, ಅಕ್ಕಲಕೋಟೆ.

೬. ಜೆ. ಎ. ರಾಯಲ್ (ಅಧ್ಯಕ್ಷ), ರಾಜಪ್ಪ (ಖಜಾಂಚಿ), ಕರ್ನಾಟಕ ಕಥೋಲಿಕ ಕ್ರೈಸ್ತರ ಕನ್ನಡ ಸಂಘ, ಬೆಂಗಳೂರು.

೭. ಎಂ. ಎಸ್. ಮೋಹನ್ ರಾಜ್, ಮೈಸೂರು.

೮. 'ಕನ್ನಡಮ್ಮ', ಬೆಳಗಾವಿ.

೯. ಎಸ್. ರಾಮಾದೇವಿ ವಿಶ್ವೇಶ್ವರಯ್ಯ, ಬೆಂಗಳೂರು.

೧೦. ಡಾ. ಎಂ. ಜಿ. ಆರ್. ಅಭಿಮಾನಿಗಳ ಸಂಘ, ಮೈಸೂರು.

೧೧. ಬಂಡೂರಾವ್ ಚಾಗಿ, ರಾಯಚೂರು.

೧೨. ಡಾ. ಸರೋಜಿನಿ ಚವಲಾರ, ಬೆಳಗಾವಿ. - ಇತ್ಯಾದಿ

❑❑

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂಥಹ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ–ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ ಸಂಸ್ಕೃತ ದ್ವಿಭಾಷಾ ಸಂದರ್ಭ. ಇಂದಿನದು ಕನ್ನಡ–ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿ ಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿ ಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶಿಸತ್ಯ'ಗಳನ್ನು ಶೋಧಿಸುವುದು.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಇತ್ತೀಚಿನ ಪುಸ್ತಕ, 'ಕನ್ನಡ ಚಳವಳಿಗಳು'.

ಅನ್ಯಾಯವನ್ನು ಸಹಿಸಿಕೊಂಡು ಹೋಗುತ್ತಲಿರುವ ಸ್ವಭಾವದ ಭಾರತೀಯರು ಇತ್ತೀಚೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಮನೋಧರ್ಮವನ್ನು ರೂಢಿಸಿಕೊಂಡಿರುವ ಫಲ 'ಚಳವಳಿ'. ಏಕೀಕರಣೋತ್ತರ ಕರ್ನಾಟಕದಲ್ಲಿ ತಲೆದೋರಿದ ಇಂಥ ಆರು ಮುಖ್ಯ ಚಳವಳಿಗಳನ್ನು ಕುರಿತು ಇತಿಹಾಸ ವಿಭಾಗ ಯೋಜನೆ ಯೊಂದನ್ನು ಕೈಗೆತ್ತಿಗೊಂಡಿದೆ. ಇದರ ಅಂಗವಾಗಿ ಪ್ರಕಟವಾಗು ತ್ತಲಿರುವ ಆರು ಕೃತಿಗಳಲ್ಲಿ 'ಕನ್ನಡ ಚಳವಳಿಗಳು' ಒಂದು. ಇದನ್ನು ರಚಿಸಿದ ಡಾ. ಸಿ. ಆರ್. ಗೋವಿಂದರಾಜು ಅವರಿಗೆ ನಮ್ಮ ಧನ್ಯವಾದಗಳು ಸಲ್ಲುತ್ತವೆ.

ಎಂ. ಎಂ. ಕಲಬುರ್ಗಿ
ಕುಲಪತಿಗಳು